ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೩೬

# ಆಳ್ವಾರುಗಳು

ಎಂ. ಯಾಮುನಾಚಾರ್ಯ, ಎಂ. ಎ.




ಮೈಸೂರು:
ಪೆಂಟ ಬ್ರಾಂಚ್ ಪ್ರೆಸ್
೧೯೪೨

ಬೆಲೆ ೨ ಆಣೆ

ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರಪುಸ್ತಕಮಾಲೆ—೩೬

# ಆಳ್ವಾರುಗಳು

ಎಂ. ಯಾಮುನಾಚಾರ್ಯ, ಎಂ. ಎ.




ಮೈಸೂರು :
ಗವರ್ನಮೆಂಟ್ ಬ್ರಾಂಚ್ ಪ್ರೆಸ್
೧೯೪೨

# ಮುನ್ನುಡಿ

ಈ ಪ್ರಚಾರಪುಸ್ತಕಮಾಲೆ ಮೂರು ವರ್ಷಗಳ ಹಿಂದೆ ಪ್ರಾರಂಭವಾಯಿತು. ಅತಿ ಸುಲಭವಾದ ಬೆಲೆಯಿಟ್ಟು ಇಂಥ ಪುಟ್ಟ ಪುಸ್ತಕಗಳನ್ನು ಹೊರಡಿಸಿದರೆ, ಅವನ್ನು ಓದಿ ಮೆಚ್ಚುವವರು ಮೈಸೂರಿನ ಜನರಲ್ಲಿ ಬಹುವಾಗಿ ದೊರೆಯುವರೆಂಬ ಭರವಸೆಯೇ ಈ ಪ್ರಯತ್ನಕ್ಕೆ ಪ್ರೇರಕ. ಮೊಟ್ಟಮೊದಲು ಮೈಸೂರು ವಿಶ್ವವಿದ್ಯಾನಿಲಯವು ಕೈಕೊಂಡ ಈ ಹೊಸ ಮಾರ್ಗದ ಉದ್ಯಮವು ಅದನ್ನು ಏರ್ಪಡಿಸಿದವರ ಅತ್ಯಂತ ನಿರೀಕ್ಷೆಯನ್ನೂ ಮೀರಿ ಫಲಕಾರಿಯಾಗಿದೆಯೆಂದು ದಿಟವಾಗಿ ಹೇಳಬಹುದು. ಈ ಮೂರು ವರ್ಷಗಳಲ್ಲಿ ೩೪ ಪುಸ್ತಕಗಳು ಪ್ರಕಟವಾಗಿವೆ. ಇವುಗಳಲ್ಲಿ ೧೨ ಸಾಹಿತ್ಯಕ್ಕೆ ಸಂಬಂಧಪಟ್ಟವು; ೧೧ ಭೌತ ಮತ್ತು ಜೀವ ವಿಜ್ಞಾನಗಳನ್ನು ಕುರಿತವು; ಉಳಿದವನ್ನು ಸಾಮಾಜಿಕಶಾಸ್ತ್ರಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಷಯಕ್ಷೇತ್ರವು ವಿಶಾಲವಾದದ್ದು. ಕನ್ನಡದ ವಿಚಾರದಲ್ಲಿ ಯಾರ ಮಾತಿಗೆ ಮನ್ನಣೆಯಿದೆಯೋ ಅಂಥ ಮಹನೀಯರು ಈ ಪುಸ್ತಕಗಳನ್ನು ಅತ್ಯುತ್ಸಾಹದಿಂದ ಬರಮಾಡಿಕೊಂಡಿದ್ದಾರೆ. ಈ ಮಾಲೆಯಲ್ಲಿ ಹೊಸದೊಂದು ಪುಸ್ತಕ ಹೊರಬಿದ್ದ ದಿನವೇ ಸುಮಾರು ೬೦೦ ಪ್ರತಿಗಳು ಮಾರಾಟವಾಗುತ್ತವೆ; ಈ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ೬೦,೦೦೦ ಪ್ರತಿಗಳು ವಿಕ್ರಯವಾಗಿವೆ. ಈ ಪುಸ್ತಕ ಮಾಲೆಯನ್ನು ಪ್ರಾರಂಭಿಸಿದವರು ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರ್ ಪದವಿಯಿಂದ ಈಗತಾನೆ ವಿಶ್ರಾಂತಿ ಪಡೆದಿರುವ ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರು; ಇದು ಯುಕ್ತವಾಗಿಯೇ ಇಷ್ಟೊಂದು ಜನಪ್ರಿಯವಾಗಿರುವುದನ್ನು ನೋಡಿ ಅವರಿಗೆ ತುಂಬ ತೃಪ್ತಿಯುಂಟಾಗಿರಬೇಕು. ಈ ಪುಸ್ತಕಗಳನ್ನು ಯಾವ ಪ್ರತಿಫಲವೂ ಇಲ್ಲದೆ ಬರೆದು ಕೊಟ್ಟಿರುವ ಗ್ರಂಥಕರ್ತರಿಗೆ

ಮೈಸೂರು ವಿಶ್ವವಿದ್ಯಾನಿಲಯದ ವಂದನೆಗಳು ಸಲ್ಲಬೇಕಾಗಿದೆ. ಈ ಮಾತುಗಳನ್ನು ಮುಗಿಸುವುದಕ್ಕೆ ಮುಂಚೆ ಈ ಮಾಲೆಯ ಪ್ರಧಾನ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತ ರಾಯರನ್ನು ಕುರಿತು ಮೆಚ್ಚಿಕೆಯ ಮಾತೊಂದನ್ನು ನಾನು ಆಡದಿದ್ದರೆ ಲೋಪವಾದೀತು. ಸಂಪಾದಕ ಕಾರ್ಯದಲ್ಲಿ ಇವರು ಸಲ್ಲಿಸಿರುವ ಕಾಲ, ಶಕ್ತಿ, ಶ್ರದ್ಧೆ ಇವು ಎಷ್ಟೆಂಬುದು ಅವರ ದುಡಿಮೆಯನ್ನು ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗ ಬಲ್ಲುದು. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರಪುಸ್ತಕ ಮಾಲೆ ಇಂದಿನಂತೆಯೇ ಮುಂದೆಯೂ ಬಹುಕಾಲ ಜನಪ್ರಿಯ ವಾಗಿ ನಿಲ್ಲಲೆಂದು ಹಾರೈಸುತ್ತೇನೆ.

ಮೈಸೂರು,
ತಾ॥ ೨೪–೪–೪೨.

ಇ. ಜಿ. ಮೆಕಾಲ್ಪೈನ್,
ವೈಸ್-ಛಾನ್ಸೆಲರ್.

# ಅರಿಕೆ

' ದಕ್ಷಿಣ ಭಾರತದ ಭಕ್ತಿ ಪಂಥಗಳು ' ಎಂಬ ವಿಷಯವಾಗಿ ತಿಪಟೂರು, ತುಮಕೂರು, ಮಧುಗಿರಿಗಳಲ್ಲಿ ಈ ಗ್ರಂಥಕರ್ತನು ಮಾಡಿದ ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಗಳೂ, ' ತಮಿಳುನಾಡಿನ ವೈಷ್ಣವ ಭಕ್ತರು ' ಎಂಬ ಹೆಸರಿನಿಂದ ' ಪ್ರಬುದ್ಧ ಕರ್ಣಾಟಕ ' ಸಂಪುಟ ೨೧, ಸಂಚಿಕೆ ೩ರಲ್ಲಿ ಬರೆದ ಲೇಖನವೂ ಈ ಪುಸ್ತಕದ ಆಧಾರವಾಗಿವೆ.

ಆಳ್ವಾರರ ಸೂಕ್ತಿಗಳನ್ನು ಉದಾಹರಿಸಲು ಕೆಲವು ಪದ್ಯಗಳನ್ನು ಇಲ್ಲಿ ಆರಿಸಿದೆ. ಅವುಗಳಲ್ಲಿ ಕೆಲವು ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು ಕನ್ನಡಿಸಿ ಪ್ರಕಟಿಸಿದವು. ಅವನ್ನು ಇಲ್ಲಿ ಕೃತಜ್ಞತೆಯಿಂದ ಉಪಯೋಗಿಸಿಕೊಂಡಿದೆ. ಇನ್ನಿತರ ಪದ್ಯಗಳ ಅನುವಾದ ಗ್ರಂಥಕರ್ತನದೇ. ಈ ಪುಸ್ತಕ ಬರೆಯಲು ಉಪಯುಕ್ತವಾದ ಸಲಹೆಗಳನ್ನಿತ್ತು ಉಪಕಾರಮಾಡಿದ ಶ್ರೀಮಾನ್ ಜಿ. ಹನುಮಂತರಾಯರಿಗೂ ಸಂಪಾದಕ ಮಂಡಲಿಯ ಇತರ ಸದಸ್ಯರಿಗೂ ಈ ಗ್ರಂಥಕರ್ತನು ಚಿರಋಣಿ.

ಎಂ. ಯಾಮುನಾಚಾರ್ಯ.

# ವಿಷಯಾನುಕ್ರಮಣಿಕೆ

# ಆಳ್ವಾರುಗಳು.

## ೧. ಪ್ರವೇಶ

ತಮಿಳು ನಾಡಿನ ವೈಷ್ಣವ ಭಕ್ತರು ಆಳ್ವಾರರೆಂಬ ಹೆಸರಿನಿಂದ ಪ್ರಸಿದ್ಧರಾಗಿರುವರು. 'ಆಳ್ವಾರ್' ಎಂಬ ಶಬ್ದಕ್ಕೆ ಮುಳುಗಿದವರು ಎಂದರ್ಥ; ಭಗವದನುಭವದಲ್ಲಿ ಆಳವಾಗಿ ಮುಳುಗಿ ಅದರಿಂದುಂಟಾದ ಆನಂದವನ್ನು ಮಧುರವಾದ ಗೀತೆಗಳ ರೂಪದಲ್ಲಿ ಹಾಡಿದವರು. ಇವರ ದಿವ್ಯ ಪ್ರಬಂಧಗಳೆಲ್ಲವೂ ತಮಿಳಿನಲ್ಲಿಯೇ ರಚಿಸಲ್ಪಟ್ಟವು. ಇದರಿಂದ ತಮಿಳು ನಾಡಿನ ಜನತೆಯಲ್ಲಿ ಈ ಕೃತಿಗಳು ಹರಡಲು ಸಾಧ್ಯವಾಯಿತು; ಅಲ್ಲದೆ ಇವುಗಳ ಪ್ರಭಾವದಿಂದ ನಾಡಿನ ನುಡಿಗೆ ಸಂಸ್ಕೃತದಷ್ಟೇ ಗೌರವ ಸಂದಿತು. ಇದರ ಸಲುವಾಗಿ ತಮಿಳಿನ ಭಕ್ತಿಸಾಹಿತ್ಯಕ್ಕೆ ಒಂದು ಜೀವ ಬಂದಂತಾಯಿತು. ಆಳ್ವಾರರ ಪ್ರಬಂಧಗಳು ನಾಲಾಯಿರ ಪ್ರಬಂಧಗಳೆಂದೂ ದ್ರಾವಿಡವೇದ ಅಥವಾ ದ್ರವಿಡೋಪನಿಷತ್ತುಗಳೆಂದೂ ಖ್ಯಾತಿಗೊಂಡಿವೆ.

ಆಳ್ವಾರರ ಹಿನ್ನೆಲೆಯನ್ನು ಕುರಿತು ಒಂದೆರಡು ಮಾತನ್ನು ಹೇಳುವುದು ಅವಶ್ಯಕ. ಇವರು ಹನ್ನೆರಡು ಮಂದಿ. ಇವರ ಕಾಲನಿಷ್ಕರ್ಷೆಯ ವಿಚಾರವಾಗಿ ವಿದ್ವಾಂಸರಲ್ಲಿ ವಿವಾದವಿದೆ. ಸಾಂಪ್ರದಾಯಿಕವಾಗಿ ಇವರು ಕ್ರಿಸ್ತಪೂರ್ವ ಮೂರು ನಾಲ್ಕು ಸಾವಿರ ವರ್ಷಗಳ ಹಿಂದಿನವರೆಂದು ನಂಬಲಾಗಿದೆ. ಆದರೆ ಚರಿತ್ರೆಯ ದೃಷ್ಟಿಯಿಂದ ಸಂಶೋಧನೆ ಮಾಡಿರುವವರು ಆಳ್ವಾರುಗಳು ಕ್ರಿ.ಶ. ೭ನೆಯ ಶತಮಾನಕ್ಕೂ ೯ನೆಯ ಶತಮಾನಕ್ಕೂ ಮಧ್ಯಕಾಲದಲ್ಲಿ ಇದ್ದರೆಂದು ಅಭಿಪ್ರಾಯಪಡುತ್ತಾರೆ.

ಆಳ್ವಾರರು ಸಾತ್ವತ ಅಥವಾ ಭಾಗವತ ಮತದ ಅನುಯಾಯಿಗಳು. ಇವರ ಮತಕ್ಕೆ ಪಾಂಚರಾತ್ರಮತವೆಂದೂ

ಏಕಾಂತಿಕ ಮತವೆಂದೂ ಹೆಸರುಂಟು. ಪಾಂಚರಾತ್ರಾಗಮಗಳಲ್ಲಿ ಸೇರಿದ ಪಾದ್ಮ ತಂತ್ರದ ಈ ಶ್ಲೋಕದಿಂದ ಇವೆಲ್ಲವೂ ಒಂದೇ ಪಂಥದ ಹೆಸರಾಗಿದ್ದುವೆಂದು ವ್ಯಕ್ತವಾಗುವುದು :

ಸೂರಿಸ್ಸುಹೃದ್ಭಾಗವತಸ್ಸಾತ್ವತಃ ಪಂಚಕಾಲವಿತ್ ।
ಏಕಾಂತಿಕಸ್ತನ್ಮಯಶ್ಚ ಪಾಂಚರಾತ್ರಿಕ ಇತ್ಯಪಿ ॥

ಭಾಗವತ ಮತವು ಬಹುಪ್ರಾಚೀನವಾದ ಮತ. ಏಕ ದೇವೋಪಾಸನೆ, ದೇವತಾಂತರ ಪರಿತ್ಯಾಗ, ಭಕ್ತಿ ಪ್ರಪತ್ತಿಗಳ ಪಾರಮ್ಯ, ಭಗವಂತನು ಪ್ರೇಮಪೂರಿತನು, ಕೃಪಾಪರಿ ಪೂರ್ಣನು, ಜಾತಿ ಕುಲ ಸ್ತ್ರೀಪುರುಷ ಭೇದಗಳಿಲ್ಲದೆ ಎಲ್ಲರಿಗೂ ಒಲಿ ಯುವನು ಎಂಬ ನಂಬಿಕೆ—ಇವು ಅದರ ಮುಖ್ಯ ತತ್ವಗಳು.

ಆಳ್ವಾರುಗಳು ಬೋಧಿಸಿದ ತತ್ವಗಳೂ ಇವೇ. ಇವರೂ ಭಾಗವತ ಪಂಥದವರು ಎಂಬುದು ಭಾಗವತ ಧರ್ಮದ ಪ್ರಮಾಣ ಗ್ರಂಥಗಳಾದ ಪಾಂಚರಾತ್ರಾಗಮಗಳು, ಮಹಾ ಭಾರತ, ಶಾಂತಿಪರ್ವದ ನಾರಾಯಣೀಯ, ಭಗವದ್ಗೀತೆ, ಭಾಗ ವತ ಪುರಾಣ, ನಾರದರ ಮತ್ತು ಶಾಂಡಿಲ್ಯರ ಭಕ್ತಿಸೂತ್ರ ಗಳು ಇವುಗಳಿಂದ ಸ್ಥಿರಪಡುತ್ತದೆ.

ಭಾಗವತಮತದ ನೆರಳಿನಲ್ಲಿ ಉಚ್ಚನೀಚಗಳೆಂಬ ಭಾವ ನೆಗೆ ಎಡೆ ಇರಲಿಲ್ಲವೆಂಬ ಅಂಶವನ್ನು ಈ ಕೆಳಗಿನ ಶ್ಲೋಕಗಳಲ್ಲಿ ಕಾಣಬಹುದು :—

ಸರ್ವೇ ಸಮಾನಾಶ್ಚತ್ವಾರೋ ಗೋತ್ರಪ್ರವರ ವರ್ಜಿತಾಃ ।
ಉತ್ಕರ್ಷೋ ನಾಪಕರ್ಷಶ್ಚ ಜಾತಿತಸ್ತೇಷು ಸಮ್ಮತಃ ॥
ಫಲೇಷುನಿಸ್ಪೃಹಾಸ್ಸರ್ವೇ ದ್ವಾದಶಾಕ್ಷರ ಚಿಂತಕಾಃ ।
ಮೋಕ್ಷೈಕನಿಶ್ಚಯಾಶ್ಶಾವಸೂತಕಾಶೌಚವರ್ಜಿತಾಃ ॥

ಭಾಗವತರಿಗೆ ನಾಲ್ಕು ವರ್ಣದವರೂ ಸಮಾನರು. ಇವರಿಗೆ ಗೋತ್ರಪ್ರವರಗಳಿಲ್ಲ, ಜಾತಿಯಲ್ಲಿ ಹೆಚ್ಚಿನವನಿಲ್ಲ ಕಡಮೆಯುವನಿಲ್ಲ. ಮೋಕ್ಷದ ಹೊರತು ಬೇರೊಂದು ಫಲಾಪೇಕ್ಷೆ ಇವರಿಗಿಲ್ಲ. ಇವರು 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರ ಮಂತ್ರದ ಚಿಂತನೆಯಲ್ಲೇ ಕಾಲಕಳೆಯುವರು.

ಇವರಿಗೆ ಸೂತಕ ಆಶೌಚಗಳ ಸೋಂಕಿಲ್ಲ. ಈ ರೀತಿಯ ಭಾವ ವನ್ನೇ ಆಳ್ವಾರರೊಬ್ಬರು, 'ಕುಲಂ ತರುಮ್ ಶೆಲ್ವಂ ತಂದಿಡುಮ್'', ಅಂದರೆ ಭಗವದ್ಭಕ್ತಿಯು ಕುಲವಿಲ್ಲದವನಿಗೆ ಕುಲವನ್ನೂ ಸಿರಿಯಿಲ್ಲದವನಿಗೆ ಸಿರಿಯನ್ನೂ ತಂದುಕೊಡುತ್ತದೆಯೆಂದು ಹೇಳಿರುತ್ತಾರೆ. ಹೀಗೆ, ಭಾಗವತಮತದಲ್ಲಿ ಭಕ್ತಿಪ್ರಪತ್ತಿಗಳಿಗೇ ಮುಖ್ಯಸ್ಥಾನ, ಜಾತಿಕುಲಗಳಿಗಲ್ಲ. ಸಮದರ್ಶಿತ್ವವನ್ನು ಬೋಧಿಸಿದ ಈ ಭಾಗವತ ಮತದ ಭಾವನೆಗಳಿಗೂ ತಾರತಮ್ಯದೃಷ್ಟಿಯನ್ನು ಪೋಷಿಸುತ್ತಾ ಬರುತ್ತಿದ್ದ ಕೆಲವು ಸಂಪ್ರದಾಯಗಳಿಗೂ ನಡೆದ ಘರ್ಷಣೆಯನ್ನೂ ಅದರ ಫಲವಾಗಿ ಸಂಭವಿಸಿದ ಧಾರ್ಮಿಕ ಪರಿಣಾಮಗಳನ್ನೂ ರಾಮಾನುಜರ ಮತ್ತು ತಿರುಪ್ಪಾಣಿ ಆಳ್ವಾರರ ಜೀವನಚರಿತ್ರೆಯಲ್ಲಿ ಮನಗಾಣಬಹುದು.

ಭಾಗವತ ಮತದಲ್ಲಿ ತ್ರಿಮೂರ್ತಿಗಳಲ್ಲೊಬ್ಬನಾದ ವಿಷ್ಣುವಿಗೆ ಮುಖ್ಯಸ್ಥಾನ ಕೊಟ್ಟಿದೆ. ವಿಷ್ಣುದೇವತೆಯು ಋಗ್ವೇದದ ದೇವತೆಗಳಲ್ಲಿ ಒಂದು ದೇವತೆಯಾಗಿದ್ದು, ಕ್ರಮೇಣ ವರುಣ, ವಿಷ್ಣು, ಆದಿತ್ಯ, ಭಗ ಎಂಬ ಹೆಸರುಗಳೆಲ್ಲವೂ ಒಬ್ಬನೇ ಭಗವಂತನ ನಾಮಾಂಕಿತಗಳೆಂದೂ ಒಬ್ಬನೇ ಆದ ದೇವದೇವನ ಉಪಾಸನೆಯೇ ಭಾಗವತ ಧರ್ಮದ ಹೆಗ್ಗುರುತೆಂದೂ ಎಣಿಸಲ್ಪಟ್ಟಿತು. ಋಗ್ವೇದ ಕಾಲದಲ್ಲಿಯೇ ಬಹುದೇವ ಮತವು ಏಕದೇವೋಪಾಸನೆಯ ಕಡೆಗೆ ತಿರುಗಿದ್ದಿತು. 'ಏಕಂ ಸದ್ವಿಪ್ರಾ ಬಹುಧಾ ವದಂತಿ' ಎಂಬುದು ಇದಕ್ಕೆ ಪ್ರಮಾಣ. ಕ್ರಮೇಣ ಇದರ ಸಲುವಾಗಿ ಇಂದ್ರ, ಯಮ, ಪೂಷನ್ ಮೊದಲಾದ ದೇವತೆಗಳು ವಿಷ್ಣುವನ್ನೇ ಅಂತರ್ಯಾಮಿಯನ್ನಾಗುಳ್ಳ ದೇವತೆಗಳೆಂದು ಗಣಿಸಲ್ಪಟ್ಟರು. 'ವಿಷ್ಲ್ ವ್ಯಾಪ್ತೌ' ಎಂಬ ಧಾತ್ವರ್ಥದಿಂದ ಈ ಪರಾತ್ಪರ ತತ್ತ್ವವು ಸರ್ವವ್ಯಾಪಿಯಾದದ್ದು ಎಂಬ ತತ್ತ್ವವು ಏರ್ಪಟ್ಟಿತು. ಪುರುಷ ಸೂಕ್ತದ ಪರಮಪುರುಷನೇ ವಿಷ್ಣುವಾದನು. ಈತನೇ ನಾರಾಯಣನೆಂದು ಉಪನಿಷತ್ತುಗಳು ಒಪ್ಪಿಕೊಂಡವು. ಮಹಾನಾರಾಯಣೋಪನಿಷತ್ತಿನ ಸರಣಿಯಂತೂ ಇದೇ ಮತದ ಸ್ಥಾಪನೆಗೆ ಬೆಂಬಲ ಕೊಟ್ಟಿತು.

ಯಚ್ಚ ಕಿಂಚಿಜ್ಜಗತ್ಯಸ್ಮಿನ್ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥

ಎಂಬ ವಾಕ್ಯವೂ,

ಸಬ್ರಹ್ಮ ಸಶಿವಃ ಸಹರಿಃ ಸೇಂದ್ರಃ ಸೋಽಕ್ಷರಃ ಪರಮಃ ಸ್ವರಾಟ್ ।

ಎಂಬ ವಾಕ್ಯವೂ ಭಾಗವತ ಮತದ ಅಂತರ್ಯಾಮಿ ತತ್ವವನ್ನೂ ಏಕೇಶ್ವರೋಪಾಸನೆಯ ಪಂಥವನ್ನೂ ಹೊರಸೂಸುವುವು.

ಈ ಮತಕ್ಕೆ ಒಂದು ವೈಯಕ್ತಿಕ ರೂಪವನ್ನು ಕೊಟ್ಟು ಇದನ್ನು ಒಂದು ವಿಶಿಷ್ಟವಾದ ಮಾರ್ಗದಲ್ಲಿ ಒಯ್ಯುವ ಕೆಲಸವು ವೃಷ್ಣಿ, ಯಾದವ, ಸಾತ್ವತ ಎಂಬ ಬುಡಕಟ್ಟಿಗೆ ಸೇರಿದ ಕ್ಷತ್ರಿಯ ವೀರನಾದ ವಾಸುದೇವ-ಕೃಷ್ಣನೆಂಬವನಿಗೆ ಸೇರಿದ್ದಿತೆಂದೂ ಈತನೇ ಭಾಗವತ ಮತದ ಪ್ರಥಮಾಚಾರ್ಯನೆಂದೂ ಐತಿಹಾಸಿಕ ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. ಛಾಂದೋಗ್ಯ ಉಪನಿಷತ್ತಿನಲ್ಲಿ ಕೃಷ್ಣ ದೇವಕೀಪುತ್ರನೆಂಬವನು ಘೋರ ಆಂಗಿರಸನೆಂಬವನ ಶಿಷ್ಯನಾಗಿದ್ದನೆಂದೂ ಭಗವತ್ ಎಂಬ ನಾಮಾಂಕಿತನಾದ ದೇವರಿಗೆ ನಮ್ಮ ಪೂಜೆಗಳೆಲ್ಲವೂ ಸಲ್ಲಬೇಕೆಂದು ಪ್ರತಿಪಾದಿಸಿದವನೆಂದೂ ಹೇಳಿದೆ. ಭಗವತ್ ಎಂಬ ದೇವರ ಉಪಾಸಕರಿಗೆ ಭಾಗವತರೆಂಬ ಹೆಸರು ಬಂದಿದೆ. ಈ ವಾಸುದೇವ-ಕೃಷ್ಣನ ಕೀರ್ತಿಯು ಎಲ್ಲೆಲ್ಲೂ ಪಸರಿಸಿತು. ಇವನ ಪ್ರಭಾವವನ್ನೂ ದೈವಿಕ ಸ್ಫೂರ್ತಿಯನ್ನೂ ಮನಗಂಡ ಈತನ ಅನುಯಾಯಿಗಳು ಇವನೇ ಭಗವಂತ ಅಥವಾ ಆತನ ಅವತಾರ ಎಂದು ನಂಬಿದರು.

ಭಾಗವತ ಧರ್ಮದ ಪ್ರಾಚೀನತೆಯನ್ನೂ ಅದರ ವ್ಯಾಪ್ತಿಯನ್ನೂ ಕೆಲವು ಐತಿಹಾಸಿಕ ಅವಶೇಷಗಳು ಪ್ರಕಟಪಡಿಸುವುವು. ಬೆಸ್ ನಗರದ ಶಾಸನ ಇವುಗಳಲ್ಲಿ ಒಂದು. * ಇದು ಉತ್ತರ ಹಿಂದೂಸ್ಥಾನದ ಬೆಸ್ ನಗರದಲ್ಲಿ ಒಂದು ಗರುಡ ಗಂಬದಮೇಲೆ ಕೆತ್ತಲ್ಪಟ್ಟಿದೆ. ಇದು ಕ್ರಿ.ಪೂ. ೧೪೦ ಅಥವಾ

---

* Epigraphia Indica, Vol. X, Inscription No. 669.

೧೩೦ ರದೆಂದು ತೀರ್ಮಾನಿಸಲಾಗಿದೆ. ಶಾಸನದ ಲಿಪಿ ಬ್ರಾಹ್ಮೀ ಲಿಪಿ. ಭಾಗವತ ಮತದ ವ್ಯಾಪ್ತಿ ಮತ್ತು ಪರದೇಶದವರ ಮೇಲೆ ಇದರ ಪರಿಣಾಮ—ಇವು ಇದರಿಂದ ತಿಳಿದುಬರುವ ಅಂಶಗಳು. ತಕ್ಷಶಿಲೆಯಲ್ಲಿ ವಾಸಮಾಡುತ್ತಿದ್ದ ಯವನ ರಾಯಭಾರಿಯಾದ ಹೆಲಿಯೋಡೋರಸ್ ಎಂಬವನು ಇದನ್ನು ಕೆತ್ತಿಸಿದನೆಂದು ವ್ಯಕ್ತವಾಗುವುದು. ಇದರ ಕನ್ನಡ ಅನುವಾದವನ್ನು ಈ ಕೆಳಗೆ ಕೊಟ್ಟಿದೆ :—

“ತನ್ನ ಆಳಿಕೆಯ ಹದಿನಾಲ್ಕನೆಯ ವರ್ಷದಲ್ಲಿ ವರ್ಧಮಾನನಾಗಿರುವ ತ್ರಾತಾರನಾದ ಕಾಶೀಪುತ್ರ ಭಾಗಭದ್ರ ರಾಜನೆಡೆಗೆ ಅಂಟಾಲಿಕಿಡಾಸ್ ಮಹಾರಾಜನಿಂದ ಪ್ರೇಷಿತನಾಗಿ ಯವನ ದೂತನಾಗಿ ಬಂದ ಡಿಯಾನ್ ಎಂಬವನ ಪುತ್ರನಾದ ತಕ್ಷಶಿಲೆಯ ನಿವಾಸಿಯಾದ ಭಾಗವತನಾದ ಹೆಲಿಯೋಡೋರನಿಂದ ದೇವದೇವನಾದ ವಾಸುದೇವನಿಗೆ ಈ ಗರುಡಧ್ವಜವು ಸ್ಥಾಪಿಸಲ್ಪಟ್ಟಿತು.

“ದಮ, ತ್ಯಾಗ, ಅಪ್ರಮಾದ ಈ ಮೂರು ಅಮೃತಪದಗಳು ಅನುಷ್ಠಿತವಾದರೆ (ಅವು ಅನುಷ್ಠಾನ ಮಾಡಿದವರನ್ನು) ಸ್ವರ್ಗಕ್ಕೆ ಒಯ್ಯುವುವು.”*

ಈ ಶಾಸನದ ವಿಚಾರವಾಗಿ ವಿನ್ಸೆಂಟ್ ಸ್ಮಿತ್ತರು ಈ ರೀತಿ ಹೇಳಿರುವರು : “ಈ ಶಾಸನ ಪತ್ರವು ಹಿಂದೂಸ್ಥಾನದ ಧಾರ್ಮಿಕ ಇತಿಹಾಸದಲ್ಲಿ ಎರಡು ರೀತಿಯಾಗಿ ಎಂದರೆ, ವಾಸುದೇವ ಭಕ್ತಿಮತದ ಪ್ರಾಚೀನತೆಯನ್ನು ಸ್ಥಾಪಿಸುವುದರಲ್ಲಿಯೂ ಮತ್ತು ಗ್ರೀಕ್ ಹೆಸರುಳ್ಳ ಗ್ರೀಕ್ ರಾಜರ ಪರಿವಾರದವರು ಹಿಂದೂದೇವತೆಗಳ ಅನುಯಾಯಿಗಳಾಗಿದ್ದರೆಂಬುದನ್ನು ಸ್ಥಾಪಿಸುವುದರಲ್ಲಿಯೂ ಪ್ರಯೋಜನಕಾರಿಯಾಗಿದೆ.” †

* ಮೂರು ಲೋಕಗಳನ್ನೂ ಅಳೆವ ತ್ರಿವಿಕ್ರಮನ ಮೂರಡಿಗಳಿಗೂ ಸ್ವರ್ಗಕ್ಕೆ ಒಯ್ಯುವ ಮೂರು ಗುಣಗಳಾದ ದಮ, ತ್ಯಾಗ ಅಪ್ರಮಾದಗಳಿಗೂ ಈ ವಾಕ್ಯಗಳಲ್ಲಿ ಸೂಚನೆ ಇರುವುದನ್ನು ಪಾಠಕರು ಕಾಣಬಹುದು.

† Oxford History of India by VINCENT SMITH, p. 124.

ಸುಮಾರು ಕ್ರಿ. ಪೂ. ೭೦೦ ರಿಂದ ಕ್ರಿ. ಪೂ. ೨೫೦ ರ ವರೆಗೆ, ಎಂದರೆ ಭಗವದ್ಗೀತೆಯು ಒಂದು ನಿಷ್ಕೃಷ್ಟರೂಪವನ್ನು ತಾಳುವ ಹೊತ್ತಿಗೆ, ವಾಸುದೇವನಿಂದ ಉಪದೇಶಿಸಲ್ಪಟ್ಟ ಭಕ್ತಿ ಪಂಥವು ಅನೇಕ ಪರಿಣಾಮಗಳನ್ನು ಪಡೆಯಿತೆಂಬುದು ಈಚಿನ ವಿದ್ವಾಂಸರ ಅಭಿಪ್ರಾಯವಾಗಿದೆ. ಉಪನಿಷತ್ತಿನ ಉಪದೇಶ ಗಳು ಸಾಂಖ್ಯಯೋಗ ದರ್ಶನಗಳೊಡನೆ ಬೆರೆತಂತೆ ಭಗವದ್ಗೀತೆ ಯಿಂದ ಊಹಿಸಬಹುದಾಗಿದೆ. ಮಹಾಭಾರತದ ನಾರಾಯಣೀಯ ಅಧ್ಯಾಯದಿಂದ ವಿಷ್ಣುವಿನ ಅವತಾರವು ಪಾಂಚರಾತ್ರಾ ಗಮಗಳ ಹೊತ್ತಿಗೆ ಒಂದು ನಿಕರವಾದ ರೂಪವನ್ನು ತಾಳಿದಂತೆ ತೋರುವುದು. ಪಾಂಚರಾತ್ರಾಗಮಗಳಲ್ಲಿ ಕೊನೆಯದೆಂದು ಭಾವಿಸಲ್ಪಟ್ಟಿರುವ ಈಶ್ವರಸಂಹಿತೆ ಎಂಬುದು ವಿಶಿಷ್ಟಾದ್ವೈತದ ಎರಡನೆಯ ಆಚಾರ್ಯರಾದ ಯಾಮುನಾಚಾರ್ಯರಿಂದ ಉದಾಹರಿ ಸಲ್ಪಟ್ಟಿದೆ. ಈ ಗ್ರಂಥವು ಕ್ರಿ. ಶ. ೮೫೦ ರಲ್ಲಿ ಬರೆಯಲ್ಪಟ್ಟಿ ತೆಂದು ವಿದ್ವಾಂಸರ ಅಭಿಪ್ರಾಯ. ಈ ಸಂಹಿತೆಯಲ್ಲಿ ದ್ರಾವಿಡ ವೇದಕ್ಕೆ ಸೂಚನೆ ಇರುವುದರಿಂದ ೯ನೆಯ ಶತಮಾನದ ಹೊತ್ತಿಗೆ ಆಳ್ವಾರರ ಕಾಲ ಮುಗಿದಿದ್ದಿತೆಂದೂ ಇವರು ವೈಷ್ಣವ ಸಿದ್ಧಾಂತ ದಲ್ಲಿ ನೆಲೆಯಾಗಿ ಸ್ಥಾಪಿಸಲ್ಪಟ್ಟಿದ್ದರೆಂದೂ ಊಹಿಸಬಹುದಾಗಿದೆ.

ಆಳ್ವಾರರಾದ ಮೇಲೆ ಬಂದವರು ಆಚಾರ್ಯರು. ಇವ ರಲ್ಲಿ ಮೊದಲಿಗರು ನಾಥಮುನಿಗಳು ; ಇವರು ಆಳ್ವಾರರ ಪ್ರಬಂಧ ಗಳನ್ನೆಲ್ಲಾ ಒಟ್ಟುಗೂಡಿಸಿದುದಲ್ಲದೆ ವಿಷ್ಣುದೇವಾಲಯಗಳಲ್ಲಿ ದೇವತಾರ್ಚನೆಯ ಸಮಯದಲ್ಲಿ ವೇದ ಮತ್ತು ಉಪನಿಷತ್ತುಗಳ ಜೊತೆಗೆ ದ್ರಾವಿಡಪ್ರಬಂಧಗಳನ್ನು ನಿತ್ಯಾನುಸಂಧಾನ ಮಾಡ ಬೇಕೆಂದು ಏರ್ಪಾಡುಮಾಡಿದರು. ಆ ಏರ್ಪಾಡು ಈಗಲೂ ಅನೂಚಾನವಾಗಿ ನಡೆದುಬರುತ್ತಿದೆ. ನಾಥಮುನಿಗಳ ತರು ವಾಯ ಕ್ರಮವಾಗಿ ಆಚಾರ್ಯಪೀಠಕ್ಕೆ ಬಂದವರು ಯಾಮುನಾ ಚಾರ್ಯರು ಮತ್ತು ರಾಮಾನುಜಾಚಾರ್ಯರು. ಇದು ಶ್ರೀವೈಷ್ಣವ ಮತದ ಪರಂಪರೆ. ರಾಮಾನುಜಾಚಾರ್ಯರಾದ ಮೇಲೆ ವಿಶಿಷ್ಟಾ ದ್ವೈತದ ಆಚಾರ್ಯರಲ್ಲಿ ಪ್ರಮುಖರಾದವರು ವೆಂಕಟನಾಥ

ರವರು. ಇವರು ವೇದಾಂತದೇಶಿಕರೆಂದೂ, ವೇದಾಂತಾಚಾರ್ಯ ರೆಂದೂ, ಕವಿತಾರ್ಕಿಕ ಸಿಂಹರೆಂದೂ ಪ್ರಖ್ಯಾತರಾಗಿದ್ದಾರೆ.

ಈ ಶ್ರೀವೈಷ್ಣವ ಸಾಧುಸಂತರ, ಜ್ಞಾನಿಗಳ, ಭಕ್ತರ ಪರಂಪರೆಯಲ್ಲಿ ಸೇರಿದವರು ಆಳ್ವಾರರು. ಇವರೆಲ್ಲರೂ ಒಟ್ಟಿನಮೇಲೆ ಚರಿತ್ರೆಯ ದೃಷ್ಟಿಯಿಂದ ಪಲ್ಲವರ ಕಾಲಕ್ಕೆ ಸೇರಿದವರು. ಕ್ರಿ.ಶ. ೭ನೆಯ ಶತಮಾನದಿಂದ ೯ನೆಯ ಶತಮಾನದ ಮಧ್ಯಭಾಗದ ವರೆಗೂ ಆಳ್ವಾರರ ಕಾಲವೆನ್ನಬಹುದು. ಇವರು ತಮಿಳುನಾಡಿನ ಬೇರೆ ಬೇರೆ ಗ್ರಾಮಗಳಲ್ಲಿ ಜನಿಸಿದವರು. ತಾಮ್ರಪರ್ಣಿ, ಕೃತಮಾಲ (ವೈಗೈ), ಪಯಸ್ವಿನೀ (ಪಾಲಾರ್), ಕಾವೇರಿ ಈ ಮಹಾನದಿಗಳ ತೀರಪ್ರದೇಶಗಳಲ್ಲಿ ಅವತಾರವೆತ್ತಿದವರು. ಈ ಜೀವನದಿಗಳು ದಕ್ಷಿಣಭಾರತದಲ್ಲಿ ಹರಿದಾಡುತ್ತಾ ಜನರ ತನುಗಳನ್ನು ತಣಿಸಿದಂತೆ ಆಳ್ವಾರರ ಭಕ್ತಿಪ್ರವಾಹವು ಅವರ ಹೃದಯಗಳನ್ನು ತಣಿಸಿತು.

ಆಳ್ವಾರರಲ್ಲಿ ಎಲ್ಲಾ ಜಾತಿಯವರೂ ಇದ್ದಾರೆ ; ಗಂಡಸರೂ ಇದ್ದಾರೆ, ಹೆಂಗಸರೂ ಇದ್ದಾರೆ. ಅವರಲ್ಲಿ ಒಬ್ಬರು ಕೇರಳದೇಶದ ರಾಜರಾಗಿದ್ದರು. ಇನ್ನೊಬ್ಬರು ಹೆಂಗಸು— ಆಂಡಾಳ್' ಅಥವಾ ಗೋದಾದೇವಿ. ತಿರುಪ್ಪಾಣಾಳ್ವಾರರು ಅಂತ್ಯಜರು. ನಮ್ಮಾಳ್ವಾರರು ವೆಳ್ಳಾಳರು. ತಿರುಮಂಗೈ ಕಳ್ಳರ ಜಾತಿಯವರು. ತಿರುಮಳಿಶೈಯವರ ಜಾತಿಯೇ ತಿಳಿಯದು. ಮತ್ತುಳಿದವರು ಬ್ರಾಹ್ಮಣಜಾತಿಯ ಆಳ್ವಾರರು. ಇವರೆಲ್ಲರೂ ವರ್ಣಭೇದ, ಸ್ತ್ರೀಪುರುಷಭೇದ, ಪಂಡಿತಪಾಮರರೆಂಬ ವ್ಯತ್ಯಾಸ ಇವನ್ನುಳಿದು—ಭಕ್ತಿಯೇ ಮುಕ್ತಿಯ ದಾರಿ, ಭಕ್ತಿಗೆ ಎಲ್ಲರೂ ಅಧಿಕಾರಿಗಳೆಂಬ ಭಾಗವತ ತತ್ವವನ್ನು ತಮ್ಮ ಜೀವನದ ನಡವಳಿಕೆಯ ಮೂಲಕ ತೋರಿಸಿದರು.

ಆಳ್ವಾರರ ಜೀವನಚರಿತ್ರೆಗೆ ನಮಗೆ ದೊರಕಿರುವ ಆಧಾರಗಳಲ್ಲಿ ಮುಖ್ಯವಾದವು ದಿವ್ಯಸೂರಿಚರಿತ, ಪ್ರಪನ್ನಾಮೃತ ಎಂಬ ಸಂಸ್ಕೃತಗ್ರಂಥಗಳು ಮತ್ತು ಗುರುಪರಂಪರಾ ಪ್ರಭಾವವೆಂಬ ಗ್ರಂಥ. ಗುರುಪರಂಪರಾಪ್ರಭಾವವು ಸಂಸ್ಕೃತ ಮತ್ತು

ತಮಿಳು ಮಿಶ್ರವಾದ ಮಣಿಪ್ರವಾಳವೆಂಬ ಸಾಂಪ್ರದಾಯಿಕ ಶೈಲಿಯಲ್ಲಿ ಸುಲಭಗ್ರಾಹ್ಯವಾಗಿ ಬರೆಯಲ್ಪಟ್ಟಿದೆ. ಆಳ್ವಾರರ ಉಪದೇಶಗಳಿಗೆ ನಾಲಾಯಿರ ಪ್ರಬಂಧಗಳೇ ಆಧಾರ. ಆಳ್ವಾರರೆಲ್ಲರೂ ತಮ್ಮ ಪ್ರಬಂಧಗಳಲ್ಲಿ ವಿಷ್ಣುವಿನ ಅರ್ಚಾವತಾರವನ್ನು ಕುರಿತು ಸ್ತುತಿಸಿರುವರು. ಭಗವಂತನ ಸೌಲಭ್ಯ ಸೌಶೀಲ್ಯಗಳಿಗೆ ಅರ್ಚಾವತಾರವೇ ಗುರುತೆಂದು ಇವರ ಭಾವನೆ. ಮೇಲೆ ಹೇಳಿದ ಆಧಾರಗ್ರಂಥಗಳು ಆಳ್ವಾರರ ಮಹಿಮೆಯನ್ನು ಕೊಂಡಾಡುವ ಸಲುವಾಗಿ ಬರೆದ ಗ್ರಂಥಗಳು. ಇವುಗಳಲ್ಲಿ ಕವಿತೆಯ ಕಲ್ಪನೆಗಳೂ ವಾಸ್ತವಿಕ ಸಂಗತಿಗಳೂ ಬೆರೆತಿವೆ. ಆಳ್ವಾರರ ಜೀವನದಲ್ಲಿ ಅನೇಕ ಪವಾಡಗಳು ಉಲ್ಲೇಖಿಸಲ್ಪಟ್ಟಿವೆ. ಇವು ಹೇಗಾದರೂ ಇರಲಿ, ಮುಖ್ಯವಾಗಿ ಇವುಗಳಿಂದ ಆ ಕಾಲದ ಜನಸಾಮಾನ್ಯರಿಗೆ ಆಳ್ವಾರರಲ್ಲಿ ಭಕ್ತಿ ಪ್ರೇಮಗಳು ಎಷ್ಟು ಅಮೋಘವಾಗಿದ್ದುವೆಂಬುದು ವ್ಯಕ್ತವಾಗುವುದು.

ಗುರುಪರಂಪರೆಯ ಕ್ರಮವನ್ನು ಆಧಾರವಾಗಿಟ್ಟುಕೊಂಡು ಆಳ್ವಾರರ ಜೀವನಕಥೆಗಳನ್ನು ಸಂಕ್ಷೇಪವಾಗಿ ಇಲ್ಲಿ ವಿವರಿಸಿದೆ. ಆಳ್ವಾರರಲ್ಲಿ ಯಾರು ಮುಂದು ಯಾರು ಹಿಂದು ಎನ್ನುವುದರಲ್ಲಿ ಸಾಂಪ್ರದಾಯಿಕ ಪ್ರಕ್ರಿಯೆಯನ್ನೇ ಬಹುಮಟ್ಟಿಗೆ ಒಪ್ಪಬಹುದಾಗಿದೆ. ಆ ಕ್ರಮ ಈ ರೀತಿಯದು—ಪೊಯ್‍ಗೈಯಾಳ್ವಾರ್, ಪೂತತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಶೈಯಾಳ್ವಾರ್, ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಆಂಡಾಳ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಾಳ್ವಾರ್, ತಿರುಮಂಗೈಯಾಳ್ವಾರ್, ನಮ್ಮಾಳ್ವಾರ್ ಮತ್ತು ಮಧುರಕವಿಯಾಳ್ವಾರ್.

## ೨. ಮೊದಲಿನ ಮೂವರು ಆಳ್ವಾರರು

ಮೊದಲಿನ ಮೂವರು ಆಳ್ವಾರರ ಜೀವನವು ಒಟ್ಟಿಗೆ ಒಂದೇ ಘಟನೆಯಲ್ಲಿ ಹೆಣೆದಿದೆ. ಪೊಯ್‍ಗೈಯಾಳ್ವಾರರು ಕಂಚಿಯ ಸರೋವರದ ಕಮಲ ಪರಾಗದಲ್ಲಿಯೂ, ಪೂತತ್ತಾಳ್ವಾರರು ಮಾಧವೀ ಕುಸುಮದಲ್ಲಿಯೂ, ಪೇಯಾಳ್ವಾರರು ಕೆಂದಾವರೆ

ಯಲ್ಲಿಯೂ ಉದ್ಭವಿಸಿದರೆಂದು ಐತಿಹ್ಯ. ಹೀಗೆ ಪುಷ್ಪಜಾತರಾದ ಈ ಮೂವರೂ ಹುಟ್ಟುತ್ತಲೇ ಜ್ಞಾನ ಭಕ್ತಿ ವೈರಾಗ್ಯ ಗಳನ್ನು ಪಡೆದವರಾಗಿ ಗ್ರಾಮೈಕರಾತ್ರರಾಗಿ ಕಾಲ ಕಳೆ ಯುತ್ತಿದ್ದರು. ಒಂದು ದಿನ ರಾತ್ರಿ ಭಗವಂತನ ಸಂಕಲ್ಪದಿಂದ ಏಕಕಾಲದಲ್ಲಿ ತಿರುಕ್ಕೋವಿಲೂರ್ ಎಂಬ ಊರಿಗೆ ಬಂದರು. ಆಗ ಬಿರುಗಾಳಿ ಎದ್ದು ದೊಡ್ಡ ಮಳೆ ಸುರಿಯಲು ಆರಂಭ ವಾಯಿತು. ಮಳೆಯ ಹೊಡೆತದಿಂದ ತಪ್ಪಿಸಿಕೊಳ್ಳಲು ಮರೆ ಯನ್ನು ಹುಡುಕಿಕೊಂಡು ಹೊರಟ ಈ ಮೂವರೂ ಆಕಸ್ಮಿಕವಾಗಿ ಒಂದೇ ಜಗುಲಿಯ ಮೇಲೆ ಬಂದು ಸೇರಿದರು. ಮೊದಲು ಪೊಯ್‌ಗೈ ಬಂದು ಆ ಜಾಗದಲ್ಲಿ ಮಲಗಿದರು. ಅನಂತರ ಬಂದ ಪೂತತ್ತಾಳ್ವಾರರು ನನಗೊಬ್ಬನಿಗೆ ಸ್ಥಳವಿದೆಯೆ ಎಂದು ಕೇಳಿ ದರು. ಮಲಗಿದ್ದವರು ಎದ್ದು, ಒಬ್ಬನಿಗೆ ಮಲಗಲೂ ಇಬ್ಬರಿಗೆ ಕೂಡಲೂ ಸ್ಥಳವಿದೆ ಎಂದರು. ಇಬ್ಬರೂ ಹಾಗೇ ಕುಳಿತರು. ಸ್ವಲ್ಪ ಹೊತ್ತಾದಮೇಲೆ ಮಳೆಯಲ್ಲಿ ನೆನೆಯುತ್ತಾ ಪೇಯಾಳ್ವಾ ರರು ಓಡಿಬಂದು ಆಸರೆ ಬಯಸಿದರು. ಕೂಡಲು ಇಬ್ಬರಿಗೆ ಜಾಗವಿದೆ, ಆದರೆ ಮೂವರು ನಿಲ್ಲಬಹುದು ಎಂದು ಉತ್ತರ ಬಂದಿತು. ಹಾಗೇ ಆಗಲೆಂದು ಮೂವರೂ ಆ ಇಕ್ಕಟ್ಟಿನಲ್ಲಿ ನಿಂತರು. ಹೊರಗೆ ಒಂದೇ ಸಮನೆ ಮಳೆ ಸುರಿಯುತ್ತಿದೆ. ಒಬ್ಬರ ಮುಖವನ್ನು ಒಬ್ಬರು ಗುರುತಿಸಲಾರದಷ್ಟು ಕತ್ತಲೆ. 'ನೀವಾರು' 'ನೀವಾರು' ಎಂದು ಒಬ್ಬರನ್ನೊಬ್ಬರು ಕೇಳಲು ಸಾಮಾನ್ಯರು ಕೊಡುವ ಪ್ರತ್ಯುತ್ತರ ಬಾರದೆ ಒಬ್ಬರು 'ನಾನು ಭಗವಚ್ಛೇಷ ಭೂತನು' ಎಂದರು. ಮತ್ತೊಬ್ಬರು 'ನಾನು ವಾಸುದೇವನ ದಾಸ' ಎಂದರು. ಮಗುದೊಬ್ಬರು 'ನಾನು ಕೋಸಲೇಂದ್ರನ ದಾಸ' ಎಂದರು. ಹೀಗೆ ಇವರು ಒಬ್ಬರಿ ಗೊಬ್ಬರು ಮಾತನಾಡಿಕೊಳ್ಳುತ್ತಿರಲು ಈ ಇಕ್ಕಟ್ಟಿನ ಪ್ರದೇಶದಲ್ಲಿ ಇವರಿಗೆ ತಿಳಿಯದಹಾಗೆ ಮತ್ತೊಬ್ಬ ವ್ಯಕ್ತಿಯು ಇವರ ನಡುವೆ ಹೊಕ್ಕು ಇವರ ಕೈಗೆ ಸಿಕ್ಕದೆ ಇದ್ದರೂ ಇವರನ್ನು ಎಲ್ಲ ಕಡೆ ಯಲ್ಲೂ ಒತ್ತರಿಸಲು ಮೊದಲು ಮಾಡಿತು. ಯೋಗದೃಷ್ಟಿ

ಯುತರಾದ ಇವರಿಗೆ ಇದು ಪರಮಾತ್ಮನೇ ಇರಬೇಕೆಂದು ಭಾಸವಾಗಿ ಆತನ ನಿಕಟಸ್ಪರ್ಶದ ಅನುಭವದಲ್ಲಿ ತಲ್ಲೀನರಾದರು. ಒಬ್ಬರಿಗೊಬ್ಬರು ಆನಂದದಿಂದ ತಮ್ಮ ತಮ್ಮ ಅನುಭವಗಳನ್ನು ಹೇಳಿಕೊಂಡು ಕತ್ತಲಲ್ಲಿ ತಮ್ಮೊಡನೆ ನಿಂತಿದ್ದ ಆ ಪರಮಾತ್ಮನ ಮಹಿಮೆಯನ್ನು "ತಿರುವಂದಾದಿ" ಎಂಬ ಮುನ್ನೂರು ಪದ್ಯಗಳ ಮೂಲಕ ಹಾಡಿದರು.

ಈ ಮುನ್ನೂರು ಪದ್ಯಗಳಲ್ಲಿ ಮೊದಲಿನ ನೂರು ಪೊಯ್ಗೈ, ಎರಡನೆಯ ನೂರು ಪೂತತ್ತಾಳ್ವಾರ್ ಮತ್ತು ಮೂರನೆಯ ನೂರು ಪೇಯಾಳ್ವಾರ್ ಹಾಡಿದ್ದು. ತಿರುವಂದಾದಿಯ ಪ್ರತಿ ನೂರು ಪದ್ಯಗಳ ಮೊದಲಿನ ಪದ್ಯವನ್ನು 'ಶ್ರೀನಿವಾಸ' ರು ಈ ರೀತಿ ಅನುವಾದಮಾಡಿರುವರು : *

ಪೊಯ್‌ಗೈ ಆಳ್ವಾರರು ರಚಿಸಿದ್ದು :

ನೆಲವೇ ಹಣತೆಯಾಗಿ ಹರಹಿದ ಕಡಲು ನೆಯ್ಯಾಗಿ
ಬಿಸುಗದಿರ ಸೂರ್ಯನೇ ಸೊಡರ ಕುಡಿಯಾಗಿರಲು
ಎಡರ ಕಡಲಾದ ಸಂಸಾರ ಅಳಿಯಲಿ ಎಂದು
ಸೊಡರಂತ ಚಕ್ರವನು ಹಿಡಿದವನ ಕನ್ನಡಿಗೆ
ನುಡಿಮಾಲೆಯಿದನು ತೊಡಿಸಿದೆನು.

ಪೂತತ್ತಾಳ್ವಾರರ ಪದ್ಯ :

ಭಕ್ತಿಯೇ ಹಣತೆ ಮಾನವಾಸೆಯೇ ನೆಯ್ಯಾಗಿ
ಆನಂದ ಅರಗಿ ಭಾವವೆ ವರ್ತಿಯಾಗಿರಲು
ಬೆಳಗಿ ಹಚ್ಚಿದೆನರಿವಸೊಡರ, ಆತುಮ ಕರಗಿ
ತಿಳಿವೀವ ತಮಿಳರಿತ ನಾನು ನಾರಾಯಣಗೆ.

---

ಇಲ್ಲಿ ಉದಾಹರಣೆಗಾಗಿ ಉಪಯೋಗಿಸಿಕೊಂಡಿರುವ ಕನ್ನಡಿಸಿದ ಪದ್ಯಗಳನೇಕವನ್ನು 'ಶ್ರೀನಿವಾಸ' ರ "ತಮಿಳು ನಾಡಿನ ವೈಷ್ಣವ ಪ್ರಬಂಧಗಳು" ಎಂಬ ಲೇಖನದಿಂದ ತಗೆದುಕೊಂಡಿದೆ. ಇದಕ್ಕೆ ಅವರಿಗೆ ಚಿರಋಣಿಯಾಗಿದ್ದೇನೆ.

ಪೇಯಾಳ್ವಾರರು ಹಾಡಿದ್ದು :

ಸಿರಿಯನ್ನು ಕಂಡೆನು ; ಹೊನ್ನೊಡಲ ಕಂಡೆನು ;
ತೊಳೆವ ಸೂರ್ಯನ ತೆರದ ಚೆಲುಹೊಗರ ಕಂಡೆನು.
ರಣದೆ ಹೊಳೆಯುವ ಹೊನ್ನ ಚಕ್ರ ಮುರಿಶಂಖವನು
ಕಡಲ ಬಣ್ಣದ ನನ್ನ ಹರಿಯ ಬಳಿ ಕಂಡೆನು.

ಅರಳಿದ ಕವಿಹೃದಯದಿಂದ ಹೊರಸೂಸುವ ಭಕ್ತಿಯ ಸೊಂಪಿನ ಕಂಪು ಈ ಪದ್ಯಗಳಲ್ಲಿದೆ.

## ೩. ತಿರುಮಳಿಶೈ

ತಿರುಮಳಿಶೈ ಎಂಬ ಗ್ರಾಮದಲ್ಲಿ ಹುಟ್ಟಿದ್ದರಿಂದ ತಿರುಮಳಿಶೈ ಆಳ್ವಾರ್ ಎಂಬ ಹೆಸರು ಬಂತು. ಇವರ ತಂದೆ ಒಬ್ಬ ಋಷಿ, ತಾಯಿ ಅಪ್ಸರಃಸ್ತ್ರೀ ; ಈಕೆಯು ಶಿಶುವನ್ನು ಹೆತ್ತು ಒಂದು ಲತಾಕುಂಜದಲ್ಲಿ ಬಿಟ್ಟು ಹೋದಳು. ಈ ಮಗುವಿನ ಅಳುವನ್ನು ಕೇಳಿ ಪಕ್ಕದಲ್ಲೇ ಬತ್ತದ ಬಳ್ಳಿಯನ್ನು ಕೊಯ್ಯುತ್ತಿದ್ದ ಬೇಡನೊಬ್ಬನು ಅದನ್ನು ಎತ್ತಿಕೊಂಡು ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟನು. ಆ ಬೇಡನ ಮನೆಯಲ್ಲಿಯೇ ಆ ಮಗು ಬೆಳೆದು ದೊಡ್ಡ ಭಕ್ತನಾದನು.—ಈ ರೀತಿಯಾದ ಕಥೆ ಬೆಳೆದಿದೆ. ಈ ಆಳ್ವಾರರು ಶ್ರೀಹರಿಯ ದಿವ್ಯ ಮಂಗಳ ವಿಗ್ರಹದ ಸೌಂದರ್ಯಾತಿಶಯವನ್ನನುಭವಿಸಿ " ನಾನ್ಮುಕನ್ ತಿರುವಂದಾದಿ " ಎಂಬ ೯೬ ಪದ್ಯಗಳನ್ನೂ, " ತಿರುಚ್ಚಂದವಿರುತ್ತಮ್ " ಎಂಬ ೧೨೦ ಪದ್ಯಗಳನ್ನೂ ರಚಿಸಿರುವರು. ತಿರುಚ್ಚಂದವಿರುತ್ತದ ಒಂದು ಪದ್ಯದಲ್ಲಿ " ನಾನು ದ್ವಿಜರಲ್ಲ ಹುಟ್ಟಲಿಲ್ಲ ; ನನಗೆ ಚತುರ್ವೇದಗಳ ಅರಿವಿಲ್ಲ ; ಇಂದ್ರಿಯ ನಿಗ್ರಹವೆಂಬುದೇನೋ ನಾನರಿಯೆ ; ನನಗೆ ತಿಳಿದಿರುವುದೊಂದೇ. ಶ್ರೀಹರಿಯ ಪಾದಪದ್ಮಗಳು. ದೇವ ! ನಿನ್ನ ಪೊನ್ನಡಿಗಳಲ್ಲದೆ ನನಗಿನ್ನೇನು ದಿಕ್ಕು ? " ಎಂದಿರುವರು. ಇನ್ನೊಂದು ಪದ್ಯದಲ್ಲಿ ಭಗವಂತನಿಗೂ ತನಗೂ

ಇರುವ ಎಡೆಬಿಡದ ಸಂಬಂಧವನ್ನೂ ಭಗವಂತನ ಕೃಪೆಗೆ ತಾನು ಎಂದೆಂದಿಗೂ ಪಾತ್ರನೆಂಬುದನ್ನೂ ಹೊರಸೂಸಿರುವರು :

> ಇಂದೋ ನಾಳೆಯೋ ಇಲ್ಲ ಇನ್ನು ಮುಂದೆಯೋ ನಿನ್ನ ಕೃಪೆಗೆ ನಾನು ಪಾತ್ರನಾಗುವುದು ನಿಜ. ಓ ನಾರಾಯಣ! ನಾನು ನೀನಿಲ್ಲದೇ ಇಲ್ಲ, ನೀನು ನಾನಿಲ್ಲದೇ ಇಲ್ಲ ಕಂಡೆಯಾ !

ಚರಾಚರ ವಸ್ತುಗಳೆಲ್ಲವೂ ಭಗವಂತನಿಂದಲೇ ಉದಯಿಸಿ ಭಗವಂತನಲ್ಲೇ ವಾಳುಗುವುವು :

> ತನ್ನೊಳೇ ಎದ್ದು ಹರಡಿ ತನ್ನೊಳೇ ಇಂಗುವ ಅಲೆಗಳನ್ನುಳ್ಳ ಬೆಳ್ನೊರೆಯ ಕಡಲಂತೆ ನಿನ್ನೊಳೇ ಹುಟ್ಟಿ ಉಳಿದ ಚರಾ ಚರಗಳೆಲ್ಲವೂ ನಿನ್ನೊಳೇ ಅಳಿಯುವುವು.

ಈ ಜಗತ್ತನ್ನು ಸೃಷ್ಟಿಸಿ ಅದರಲ್ಲಿಯೇ ಅವತರಿಸಿದರೂ ಯಾವ ಒಂದು ತಾವಿಗೂ ಅಂಟದ ಸೂಕ್ಷ್ಮವಸ್ತು ಭಗವಂತ. ಜಗತ್ತೆಲ್ಲವೂ ಅವನ ಶರೀರ. ಅದರ ಆತ್ಮವೇ ಅವನು ಎಂಬ ತತ್ವನಿರೂಪಣೆಯನ್ನು ಇನ್ನೊಂದು ಪದ್ಯದಲ್ಲಿ ಮಾಡಿರುವರು.

ತಿರುಮಳಿಶೈಯವರ ಪದ್ಯಗಳಲ್ಲಿ ಭಕ್ತಿಭಾವನೆ ಮಾತ್ರ ವಲ್ಲದೆ ತತ್ವಚಿಂತನೆ ಬಹುವಾಗಿ ಮೂಡಿದೆ.

ಏಕದೇವೋಪಾಸನೆ ಮತ್ತು ಕ್ಷುದ್ರ ದೇವತೆಗಳ ನಿರಾ ಕರಣವು ಈ ಪದ್ಯದಲ್ಲಿದೆ :—

> ನೋಟಕ್ಕೆ ಸೊಗಸದ ಕ್ರೂರಿ ದೇವತೆಗಳನ್ನು ಪೂಜಿಸುವಿರೇಕೆ ? ಕಿವಿಗೆ ಕೇಳಲು ಸಹಿಸಲಾಗದ ಕಟ್ಟುಕತೆಗಳನ್ನು ಕೇಳು ವುದೇಕೆ ? ಬೇಡಿದರೂ ವರವೀಯಲಾರದ ದೇವರುಗಳಿವು. ವರಗಳಿತ್ತರೂ ನಿಮ್ಮನ್ನು ಬದುಕಿಸಲಾರದ ವರಗಳನೀಯು ವಂತವು.
>
> ಇವುಗಳನ್ನು ತೊರೆದು ಜಗದೇಕನಾದನಾದ ನನ್ನ ಸ್ವಾಮಿಯನ್ನು ಶರಣುಹೊಂದಿ ಸಂಸಾರ ಬಂಧನದಿಂದ ಪಾರಾಗಿರಿ.

# ೪. ಕುಲಶೇಖರಾಳ್ವಾರ್

ಕುಲಶೇಖರರು ತಿರುವಾಂಕೂರಿನ ರಾಜರಾಗಿದ್ದರು. ಒಂಬತ್ತನೆಯ ಶತಮಾನದ ಪ್ರಾರಂಭದಲ್ಲಿದ್ದಿರಬಹುದು. ಇವರು ರಾಜ್ಯವನ್ನು ಸಾಮರ್ಥ್ಯದಿಂದ ಆಳುತ್ತಿದ್ದರು. ಆದರೆ ಸದಾ ಪಾರಮಾರ್ಥಿಕ ಚಿಂತನೆಯು ಭಕ್ತಿಮಾರ್ಗಕ್ಕೆ ಇವರನ್ನು ಸೆಳೆಯುತ್ತಿತ್ತು. ಭಕ್ತಿಗೆ ತಕ್ಕ ಜ್ಞಾನ, ಜ್ಞಾನಕ್ಕೆ ತಕ್ಕ ವೈರಾಗ್ಯ ಇವರಲ್ಲಿ ಮೂಡಿದ್ದುವು. ಮುಕುಂದನಿಗೆ ಅರ್ಪಿಸಿದ ಇವರ ಪದ್ಯಮಾಲೆಯು ಇವರ ಭಕ್ತಿಭಾವದ ಪರಾಕಾಷ್ಠೆಯನ್ನು ನಮಗೆ ತೋರಿಸಿಕೊಡುವುದು. ವೈಷ್ಣವ ಸ್ತೋತ್ರಗಳಲ್ಲಿ 'ಮುಕುಂದಮಾಲೆ' ಗಿಂತಲೂ ಹೆಚ್ಚು ವ್ಯಾಪಕವಾದ ಮತ್ತು ಮೋಹಕವಾದ ಸ್ತೋತ್ರವು ಮತ್ತೊಂದಿಲ್ಲವೆನ್ನಬಹುದು. ಜಯದೇವ ಕವಿಯ 'ಗೀತಗೋವಿಂದ'ದಂತೆ ಗಾನಕುಶಲರ ಮೆಚ್ಚುಗೆಗೆ ಪಾತ್ರವಾದ ಸ್ತೋತ್ರವಿದು. 'ಮುಕುಂದಮಾಲೆ'ಯ ಒಂದೊಂದು ಶ್ಲೋಕವೂ ನಮ್ಮ ಹೃದಯವೀಣೆಯ ನಾದವನ್ನು ಹೊಮ್ಮಿಸುತ್ತದೆ. ಇವರ ವಿರಕ್ತಿಭಾವವು ದಿನೇದಿನೇ ಹೆಚ್ಚುತ್ತ ಬಂದು ಕಡೆಗೆ ಅವರು ರಾಜ್ಯಭಾರದಿಂದ ನಿವೃತ್ತರಾಗಿ ಯೋಗಿ ಜೀವನವನ್ನು ಕೈಕೊಂಡರು. ಇವರ ಭಗವದನುಭವಜನಿತವಾದ ಆನಂದದ ಪರವಶತೆಯನ್ನು ಇವರ "ಪೆರುಮಾಳ್ ತಿರುಮೊಳಿ" ಯ ಮುನ್ನೂರು ಪದ್ಯಗಳಲ್ಲಿ ಕಾಣಬಹುದು. ಅದರ ಕೆಲವು ಪದ್ಯಗಳ ಭಾವಾನುವಾದವನ್ನು ಇಲ್ಲಿ ಕೊಟ್ಟಿದೆ :

ಬಾನನಾಳುವ ಚಂದ್ರನಂತೆ ಬಿಳಿದಾಗಿರುವ ಈ ಛತ್ರಿಯ ಕೆಳಗೆ ಅಟ್ಟಹಾಸದಿಂದ ಕುಳಿತು ಅರಸರ ಅರಸನಾಗಿ ಆಳುವವನ ಸಂಪತ್ತನ್ನು ಸಂಪತ್ತೆಂದು ಒಂದು ಕ್ಷಣಮಾತ್ರವೂ ಭಾವಿಸಲಾರೆ. ಎಲ್ಲರೂ ಕೊಂಡಾಡುವ ಈ ಸಂಪತ್ತು ನನಗೆ ಬೆಲೆ ಇಲ್ಲದುದು. ಇದಕ್ಕಿಂತಲೂ ತಿರುವೇಂಗಡದ ಬೆಟ್ಟಗಳಲ್ಲಿ ಸ್ವೇಚ್ಛೆಯಾಗಿ ಹರಿದಾಡುವ ಕಾಡುಹೊಳೆಯಾಗಿರುವುದು ಲೇಸು. ಈ ವರವನ್ನು ಭಗವಂತನು ನನಗೀಯಲಿ.

ಪರಿಮಳ ಭರಿತವಾದ ಹೂಗಳ ಮಧ್ಯೆ ನಿಂತಿರುವ ಸ್ವಾಮಿಯೇ! ನೀನೇ ತರುವ ದುಃಖವನ್ನು ನೀನೇ ಹೋಗಿಸುವೆಯಾದುದರಿಂದ

ನಿನ್ನ ಶರಣವಲ್ಲದೆ ಬೇರೇ ಶರಣವಿಲ್ಲ ಎನಗೆ. ಹೆತ್ತ ತಾಯಿ ಯಾದವಳು ಕೋಪದಿಂದ ತನ್ನ ಮಗುವನ್ನು ತಳ್ಳಿಬಿಟ್ಟರೂ ತನ್ನ ತಾಯಿಯ ಪ್ರೀತಿಯನ್ನೇ ನೆನೆದು ಅವಳ ಕಾಲನ್ನೇ ಕಟ್ಟಿ ಕೊಂಡು ಅಳುವ ಮಗುವಿನಂತೆ ನಾನು ನಿನ್ನನ್ನು ಬಿಡಲೊಲ್ಲೆ.

ಕಂಡವರೆಲ್ಲರೂ ಹಳಿಯುವಂತಹ ಕಾರ್ಯಗಳನು ತನ್ನ ಕಾಂತನು ಮಾಡಿದ್ದರೂ ಅವನ ಹೊರತು ಬೇರೊಬ್ಬನನ್ನು ಮನದಿಂದಲೂ ಕೂಡ ನೆನೆಯದ ಕುಲಸ್ತ್ರೀಯಂತೆ ನಿನ್ನ ಕೈಹಿಡಿದ ನಾನು ನೀನು ಕೈಬಿಟ್ಟರೂ ನಿನ್ನನ್ನು ಬಿಟ್ಟು ಬೇರೊಂದರಲ್ಲಿ ಪ್ರೀತಿಯ ನಿಡೆನು.

ಕತ್ತಿಯಿಂದ ಕುಯಿದು ಕಾದ ಸೂಜಿಯಿಂದ ಸುಟ್ಟು ನೋಯಿಸಿ ದರೂ ವೈದ್ಯನಲ್ಲಿ ರೋಗಿಯು ನಂಬುಗೆ ಇಡುವಂತೆ ಸರ್ವ ಸ್ವಾಮಿಯಾದ ನೀನು ನಿನ್ನ ಮಾಯೆಯಿಂದ ನನ್ನ ದುಃಖವನ್ನು ದೀರ್ಘಕಾಲ ಬೆಳಸಿದರೂ ನಿನ್ನಡಿಯಾಳಾದ ನಾನು ನಿನ್ನ ಸೇವೆ ಗಾಗಿಯೇ ಕಾದು ನಿನ್ನರುಳನ್ನೇ (ಕೃಪೆಯನ್ನೇ) ಎದುರು ನೋಡುತ್ತಿರುವೆನು.

ಮಳೆಹುಯ್ಯದೆ ಮೋಘಗಳು ಎಷ್ಟು ಕಾಲದವರೆಗೆ ಮರೆತಿದ್ದರೂ ಹಚ್ಚನೆಯ ಪೈರು ಮಾತ್ರ ಕತ್ತೆತ್ತಿ ಮುಗಿಲನ್ನೇ ಎದುರು ನೋಡುವಂತೆ ಅನುಭವಿಸಿಯೇ ಕಳೆಯಬೇಕಾದ ದುಃಖವನು ನೀನು ಹೋಗಲಾಡಿಸದಿದ್ದರೂ ನನ್ನ ಮನಸ್ಸು ನಿನ್ನ ಕಡೆಗೇ ನೋಡುತ್ತಿದೆ.

ನದಿಗಳೆಲ್ಲವೂ ಹೀಗೆ ಹಾಗೆ ಕಂಡೆಡೆಯಲ್ಲೆಲ್ಲಾ ಹರಿದರೂ ಬೇರೊಂದೆಡೆಯಲ್ಲಿ ನಿಲ್ಲಲಾರದೆ ಕೊನೆಗೆ ಆಳವಾದ ಕಡ ಲನ್ನೇ ಹೊಗುವಂತೆ ನಾನೆಲ್ಲೆಲ್ಲಿ ಅಲೆದು ಬಂದರೂ ಕೊನೆಗೆ ನಿನ್ನಲ್ಲಿ ಮುಳುಗುವ ಆನಂದವೇ ನನ್ನ ಶರಣು.

## ೫. ಪೆರಿಯಾಳ್ವಾರ್

ಕುಲಶೇಖರರ ತರುವಾಯ ಗುರುಪರಂಪರಾಕ್ರಮದಲ್ಲಿ ಬಂದವರು ಪೆರಿಯಾಳ್ವಾರರು. ಇವರು ಬ್ರಾಹ್ಮಣರು. ಶ್ರೀವಿಲ್ಲಿ ಪುತ್ತೂರಿನಲ್ಲಿ ಹುಟ್ಟಿದವರು. ಇವರಿಗೆ ಹೂಗಳೆಂದರೆ, ಹೂದೋಟ ವೆಂದರೆ ಬಹು ಪ್ರೀತಿ. ಶ್ರೀವಿಲ್ಲಿಪುತ್ತೂರಿನ ದೇವಸ್ಥಾನವು ವಟಪತ್ರಶಾಯಿಯ ದೇವಸ್ಥಾನ. ಆ ದೇವರಲ್ಲಿ ಇವರಿಗಿದ್ದ ಭಕ್ತಿ ವಾತ್ಸಲ್ಯಭಕ್ತಿ : ತಾಯಿಗೆ ಮಗುವಿನಲ್ಲಿರುವಂತಹುದು ;

ಯಶೋದೆಗೆ ಕೃಷ್ಣನಲ್ಲಿದ್ದ ಪ್ರೇಮಕ್ಕೆ ಸದೃಶವಾದುದು. ಆಲದ ಎಲೆಯಮೇಲೆ ಮಲಗಿ ಶಿಶುರೂಪವನ್ನು ತಾಳಿದ ಜಗದೀಶ್ವರನೇ ಇವರ ಉಪಾಸನೆಗೆ ವಿಷಯವಾಗಿದ್ದನು. ಪೆರಿಯಾಳ್ವಾರರ ಮನಸ್ಸು ತಾಯಿಯಂತಹ ಮನಸ್ಸು. ಮಗುವಿಗೆ ಯಾವ ಸಮಯದಲ್ಲಿ ಏನು ಆಪತ್ತು ಸಂಭವಿಸುವುದೋ ಎಂಬ ಯೋಚನೆ ತಾಯಿಗಿರುವುದು ಸಹಜ ಹಾಗೆಯೇ, ಕಾಲ ದೇಶಗಳಿಗೆ ಅತೀತನಾದ ಜಗದೀಶ್ವರನೇ ಕಾಲಾನುಗುಣವಾದ ಈ ಜಗತ್ತಿನ ಕಟ್ಟುಗಳಿಗೆ ಸಿಕ್ಕಿಬಿದ್ದಿರುವನಲ್ಲ ; ಆ ಪರಮಾತ್ಮನಿಗೂ ಇದರಿಂದ ಏನು ಕೇಡು ಸಂಭವಿಸುವುದೋ ಎಂದು ಸಂತತವಾಗಿ ಪೆರಿಯಾಳ್ವಾರರ ಹೃದಯ ತಲ್ಲಣಿಸುತ್ತಿತ್ತು. ಇದೊಂದು ಬಗೆಯ ಭಗವದ್ಭಕ್ತಿ, ಭಗವದ್ವಾತ್ಸಲ್ಯ. ಇದನ್ನು ನಾವು ಅರ್ಥಮಾಡಿಕೊಂಡ ವಿನಾ ಅವರು ಪಾಡಿದ "ತಿರುಪ್ಪಲ್ಲಾಂಡು" ನಮ್ಮ ಮನಸ್ಸಿಗೆ ಹತ್ತುವುದಿಲ್ಲ.

ನಿತ್ಯಾನುಸಂಧಾನಕ್ಕೆ ಗೊತ್ತಾಗಿರುವ ಪ್ರಬಂಧಗಳಲ್ಲಿ ತಿರುಪ್ಪಲ್ಲಾಂಡಿಗೆ ಬಹು ಮುಖ್ಯ ಸ್ಥಾನವಿದೆ. ನಾಲಾಯಿರ ಪ್ರಬಂಧಗಳ ಅಧ್ಯಯನ ಮಾಡಬೇಕಾದಾಗಲೆಲ್ಲಾ ತಿರುಪ್ಪಲ್ಲಾಂಡಿನಿಂದ ಪ್ರಾರಂಭವಾಗಿ ತಿರುಪ್ಪಲ್ಲಾಂಡಿನಿಂದ ಮುಗಿಸುವ ಪದ್ಧತಿ ಈಗಲೂ ಇದೆ. ದೇವತಾರ್ಚನೆಯ ಸಮಯದಲ್ಲಿ ದೇವರಿಗೆ ಆರತಿ ಬೆಳಗಿದಾಗ ತಿರುಪ್ಪಲ್ಲಾಂಡನ್ನು ಹೇಳಲೇಬೇಕಾದ ವಿಧಿಯೂ ಇದೆ.

ಇದರ ಸಂಬಂಧವಾಗಿ ಒಂದು ಐತಿಹ್ಯವಿದೆ. ಪೆರಿಯಾಳ್ವಾರರಿಗೆ ವಿಷ್ಣುದೇವತೆಯು ಪ್ರತ್ಯಕ್ಷನಾದನು. ಸೌಂದರ್ಯ, ಸೌಕುಮಾರ್ಯ, ಲಾವಣ್ಯ, ಯೌವನಾದಿ ಗುಣಗಳಿಂದ ಬೆಳಗುತ್ತಿದ್ದ ದಿವ್ಯ ಮಂಗಳವಿಗ್ರಹದ ಆ ಕನಸನ್ನು ಕಂಡು ಅವರು ಪ್ರೇಮಪರವಶರಾದರು. ತನಗೆ ದರ್ಶನವಿತ್ತ ದೇವನು ಸರ್ವಜ್ಞ, ಸರ್ವಶಕ್ತ, ಸರ್ವರಕ್ಷಕ ಎಂಬುದನ್ನೂ ಮರೆತು ಇಂತಹ ಸೌಂದರ್ಯಕ್ಕೆ ಯಾವ ಚ್ಯುತಿ ಬರುವುದೋ ಎಂದು ಭಯಪಟ್ಟು ತನ್ನ ಸ್ವಾಮಿಗೆ ಕ್ಷೇಮವನ್ನು ಕೋರುವ ಮಂಗಳಾಶಾಸನಪದ್ಯವಾದ ತಿರುಪ್ಪಲ್ಲಾಂ

ಡನ್ನು ಹಾಡಿದರು. ಆ ಸೌಂದರ್ಯಮೂರ್ತಿಯ ಪೊನ್ನಡಿ ಕಾಣಲು ಆಶೆಪಡುವವರೆಲ್ಲರೂ ತಮ್ಮೊಡನೆ ಸೇರಿ ಪಾಡಿರೆಂದು ಅವರು ಕರೆದರಂತೆ. ತಿರುಪ್ಪಲ್ಲಾಂಡಿನ ಪದ್ಯಗಳಲ್ಲಿ ಕೆಲವನ್ನು 'ಶ್ರೀನಿವಾಸ' ರು ಕನ್ನಡಿಸಿರುವರು. ಅದರಲ್ಲಿ ಒಂದೆರಡನ್ನು ಇಲ್ಲಿ ಕೊಟ್ಟಿದೆ.

ಪಲಕಾಲ ಪಲಕಾಲ ಪಲವು ಸಾವಿರಕಾಲ ಪಲಕೋಟಿ ನೂರುಕಾಲ
ಮಲ್ಲನನು ಗೆಲಿದ ನಿಡುತೋಳ ಮಣಿವರ್ಣಾ ನಿನ್ನ ಕನ್ನಡಿಯ
ಕೆಂಪಿಗೆ ರಕ್ಷೆ ಇರಲಿ.
ಈ ದಾಸನಿಗೆ ನಿನಗೆ ಹಲಕಾಲ ಸಾಸಿರಕು ಸಂಬಂಧ ಹಿಂಜದಿರಲಿ,
ನಿನ್ನ ಬಲಬದಿಯನ್ನು ಬಿಡದಿರುವ ಸಿರಿದೇವಿ ಸೊಗವಿರಲಿ
ಹಲವು ಕಾಲ.
ಮಿಗುಹೊಗರ ಚೆಲುವಸೂಡರಂತೆ ಬಲಕಿಹ ಚಕ್ರ ಸೊಗವಿರಲಿ
ಬಹುಳಕಾಲ. ಹಗೆಯ ಸೈನ್ಯವ ಹೊಕ್ಕು ಮೊಳಗುವಾ ಪಾಂಚ
ಜನ್ಯಕೆ ಸ್ವಸ್ತಿ ಹಲವು ಕಾಲ.

ಮತ್ತೊಂದು ಪದ್ಯದಲ್ಲಿ—

"ಎಂದು ನನ್ನೊಡೆಯಾ ನಿನಗೆ ಅಡಿಯಾಳುಗಳು ನಾವೆಂದು ಬರೆ
ಕೊಂಡೆವೋ
ಅಂದೆ ಮುಕ್ತಿಯಿನಾಂತು ಈ ಸೇವಕರ ಕುಲವೆ ಉಜ್ಜೀವಿಸಿತು,
ನಿಶ್ಚಯ.

ಮುಕ್ತಿ ಎಂದರೆ ಭಗವಂತನಿಗೆ ದಾಸ್ಯ ಮತ್ತು ಭಗವಂತನ ಕೈಂಕರ್ಯ ಎಂಬ ಭಾವನೆಯನ್ನು ತಿಳಿಯಾದ ನುಡಿಯಲ್ಲಿ ತಿಳಿಸಿರುವರು.

ಪೆರಿಯಾಳ್ವಾರರ ಇನ್ನೊಂದು ಪದ್ಯಮಾಲೆ "ತಿರುಮೊಳಿ" ಎಂಬುದು. ಇದರಲ್ಲಿ ತಾವು ಯಶೋದೆಯಂತೆ ಭಾವಿಸಿಕೊಂಡು ಕೃಷ್ಣನ ಲೀಲಾ ಚೇಷ್ಟಿತಗಳನ್ನು ವರ್ಣಿಸಿರುವರು. ಈ ಪದ್ಯಗಳ ಮುಖ್ಯ ಅಭಿಪ್ರಾಯವಿದು: ದೇವರು ಸರ್ವಜ್ಞ, ಸರ್ವಶಕ್ತನಾದರೂ, ಮನುಷ್ಯನ ಮನಸ್ಸಿಗೂ ಮಾತಿಗೂ ನಿಲುಕದ ಸ್ವರೂಪವುಳ್ಳವನಾದರೂ ಭಕ್ತನ ಭಕ್ತಿಗೆ ಕಟ್ಟುಬೀಳುವನು. ತನ್ನ ಸೌಶೀಲ್ಯ ಸೌಲಭ್ಯಾದಿ ಗುಣಗಳಿಂದ ಭಕ್ತರೊಡನೆ ನಲಿಯುವನು. ಈ ಭಕ್ತರು ಭಗವಂತನ ಸೌಶೀಲ್ಯ ಸೌಲಭ್ಯಾದಿ

ಗುಣಗಳನ್ನು ಅವನ ಅವತಾರ ಚೇಷ್ಟಿತಗಳಲ್ಲಿ ಕಾಣುವರು. ತಮ್ಮ ವಾತ್ಸಲ್ಯಭಕ್ತಿಯುತವಾದ ಪದ್ಯವೊಂದರಲ್ಲಿ ಈ ರೀತಿ ಆಳ್ವಾರರು ಹೇಳಿರುವರು. 'ಶ್ರೀನಿವಾಸ' ರ ಅನುವಾದವಿದು :

ಸಂಪಿಗೆ ಮಲ್ಲಿಗೆಯೊಡನೆ ಚೆಂಗಳು ನೀರು ಇರವಂತಿಯು
ಎಣಿಸದಷ್ಟು ಹೂವನ್ನು ತಿರಿದು ತಂದೆನು, ಇವನು ಸೂಡಿಕೊ ಬಾ ಎಂದು
ನೆಲನ ಬೇಡಿಕೊಂಡಾತನನ್ನು ಗೋಪಿ ಕರೆದ ನಲ್ನುಡಿಯು ಈ ಮಾಲೆ
ಹಾಡುವಂತೆ ವಿಲ್ಲಿಪುತ್ತೂರನಾಥ ಭಟ್ಟಪಿರಾನ್ ನುಡಿದ ಹತ್ತು.

'ಪಟ್ಟರ್ ಪಿರಾನ್' ಎನ್ನುವುದು ಪೆರಿಯಾಳ್ವಾರರ ವಿದ್ಯಾ ಪ್ರೌಢಿಮೆಯನ್ನು ಮೆಚ್ಚಿ ಅವರಿಗೆ ಪಾಂಡ್ಯರಾಜನಾದ ಶ್ರೀವಲ್ಲಭ ದೇವನಿತ್ತ ಬಿರುದೆಂದು ಐತಿಹ್ಯವಿದೆ.

ತಿರುವೇಂಗಡದ ನಾಥನನ್ನು ಕುರಿತು ಹೇಳಿದ ಪದ್ಯಗಳಲ್ಲಿ ಕೆಲವು ಪಂಕ್ತಿಗಳನ್ನು 'ಶ್ರೀನಿವಾಸ' ರು ಈ ರೀತಿ ಕನ್ನಡಿಸಿ ರುವರು :

ಬಾನ್‌ಕೂರೆವ ತಲೆಯು ತಣ್ ತಿರುವೇಂಗಡದ ಒಡೆಯು
ಲೋಕವನು ಹೊರೆವ ದಾಮೋದರಾ ಚದುರ
ನನಗೆ ನನ್ನದಕೆ ನಿನತೆಂಬ ಮುದ್ರೆಯನೊತ್ತಿ
ಕೃಪೆಯು ಬೇಡುತಲಿಹೆನು ನಿನ್ನ ಮನಸೆಂತು ?

ಪಕ್ಷಿವಾಹನ ಪರಮಪುರುಷ ನೀ ಕೈಹಿಡಿದು
ಹುಟ್ಟುಕಡಲಾರಿ ಹಿರಿಪದವ ಬಂದಿತ್ತೆ ನನಗೆ ;
ಇರುವಿರಿವ ಪಾಪ ಕಾಂತಾರ ಸುಟ್ಟುರಿಯಾಗಿ
ಅರಿವಪುಷ್ಕರನದಿ ತಲೆಯು ಮುಟ್ಟಿ ಬಾಯ್ ಮುಚ್ಚಿಹುದು.

## ೬. ಆಂಡಾಳ್

ದೇವರಿಗೆ ಪ್ರತಿದಿನವೂ ತಾನೇ ಬೆಳಸಿದ ಹೂಗಳನ್ನೂ ತುಲಸಿಯನ್ನೂ ಅರ್ಪಿಸುವುದು ಪೆರಿಯಾಳ್ವಾರರ ಜೀವನದ ಆನಂದ. ಇವರಿಗೆ ಈ ಆನಂದಕ್ಕೆ ಆನಂದ ಸೇರುವಂತೆ ಆಂಡಾ

ಳೆಂಬ ಮುದ್ದು ಕುವರಿ ಇದ್ದಳು. ಇವಳದು ಸಹಜವಾದ ಸೌಂದರ್ಯ; ಕಪಟವನ್ನೇ ಅರಿಯದ ಈಕೆಗೆ ಎಳೆಯ ತಿಳಿಯ ಮನಸ್ಸು; ಪ್ರೇಮದಿಂದ ತುಂಬಿದ ಹೃದಯ. ಮದುವೆಯ ವಯಸ್ಸೂ ಬಂದಮೇಲೆ ಈಕೆಗೆ ಅನುರೂಪನಾದ ವರನನ್ನೆಲ್ಲಿ ತರುವುದೆಂಬ ಚಿಂತೆ ಇವರಿಗೆ ಆಗಾಗ ಮೂಡುತ್ತಿತ್ತು. ಅಂತಹ ಸಂದರ್ಭಗಳಲ್ಲಿ ಪೆರಿಯಾಳ್ವಾರರು ಆಂಡಾಳನ್ನು ತಮ್ಮ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಭಗವಂತನ ಸೌಂದರ್ಯವನ್ನು ಕುರಿತು ವಿಧ ವಿಧವಾಗಿ ಹಾಡಿ ವರ್ಣಿಸುತ್ತಿದ್ದರು. ಇದನ್ನು ಕೇಳುತ್ತಾ ಕೇಳುತ್ತಾ ಆಂಡಾಳಿಗೆ ಆ ದಿವ್ಯ ಸುಂದರ ಮೂರ್ತಿಯಲ್ಲಿ ಪ್ರೇಮವು ಬೆಳೆಯುತ್ತಾ ಬಂತು. ತಂದೆಯೊಡನೆ ತೋಟದ ಕೆಲಸದಲ್ಲೂ ತಂದೆಯ ಆರಾಧನೆಯ ಕೈಂಕರ್ಯದಲ್ಲೂ ಭಾಗಿಯಾ ದಳು. ತಂದೆಯಂತೆಯೇ ಆಂಡಾಳಿಗೆ ಹೂಗಳೆಂದರೆ ಬಲು ಆಸೆ. ಹೂಗಳನ್ನು ಮುಡಿಯುವುದೆಂದರೆ ಅವಳಿಗೆ ಬ್ರಹ್ಮಾ ನಂದ. ತಾನು ಮುಡಿದದ್ದನ್ನು ದೇವರಿಗೆ ಅರ್ಪಿಸಬೇಕೆಂದರೆ ಮತ್ತೂ ಆನಂದ. ತಂದೆಯು ಮುಂಜಾನೆ ಎದ್ದು ಉಷಸ್ಸಿನ ಕರಸ್ಪರ್ಶದಿಂದ ಎಚ್ಚೆತ್ತ ಮಲ್ಲಿಗೆ, ಜಾಜಿ, ಸಂಪಗೆ ಮುಂತಾದ ಮಂಜಿನ ತುಂತುರುಗಳಿಂದ ಕೊಯ್ದು ಹೂಗಳನ್ನೂ ತುಲಸೀ ದಳ ಗಳನ್ನೂ ಮೃದುವಾಗಿ ಕಿತ್ತು ಬುಟ್ಟಿಯಲ್ಲಿ ಹಾಕಿ ಮನೆಗೆ ತರುತ್ತಿದ್ದರು. ದೇವಸ್ಥಾನಕ್ಕೆ ಒಯ್ಯುವ ಮುಂಚೆ ಹೂಗೊಂಚಲು ಕಟ್ಟಿ ಇಡುವ ಕೈಂಕರ್ಯ ಆಂಡಾಳಿನದು. ಆದರೆ ಇಷ್ಟಕ್ಕೇ ಅವಳು ತೃಪ್ತಳಾಗುತ್ತಿರಲಿಲ್ಲ. ತಾನದನ್ನು ಮೊದಲು ಮುಡಿದು ಕನ್ನಡಿಯಲ್ಲಿ ತನ್ನ ಸೊಬಗನ್ನು ನೋಡಿಕೊಳ್ಳುವಳು. ತನಗೆ ಸೊಗಯಿಸುವ ಹೂಗಳು ತನ್ನ ಸ್ವಾಮಿಗೂ ಒಪ್ಪಿಗೆಯಾಗುವು ವೆಂದು ಭರವಸೆ ಹೊಂದಿ ಹೂವಿನ ಹಾರವನ್ನು ಬುಟ್ಟಿಯಲ್ಲಿಡು ತ್ತಿದ್ದಳು. ಹೀಗೆ ಬಹಳಕಾಲ ನಡೆಯಿತು.

ಒಂದುದಿನ ಪೆರಿಯಾಳ್ವಾರರು ತಮ್ಮ ಮಗಳು ಮಾಡುತ್ತಿದ್ದ ಅಪಚಾರವನ್ನು ಕಂಡುಬಿಟ್ಟರು. ಅವಳು ಮೊದಲು ಮುಡಿದ ಹೂವನ್ನು ದೇವರಿಗೆ ಅಷ್ಟು ದಿನವೂ ಅರ್ಪಿಸುತ್ತಿದ್ದ ಅನಾಚಾರ

ಕ್ಕಾಗಿ ಖಿನ್ನರಾದರು ; ಮಗಳ ಮೇಲೆ ಸಿಟ್ಟುಗೊಂಡರು. ತಂದೆ ಮಕ್ಕಳಿಗೆ ಎಂದೂ ಇಂತಹ ಬಿಕ್ಕಟ್ಟು ಒದಗಿರಲಿಲ್ಲ. ಆ ದಿನ ಪೆರಿಯಾಳ್ವಾರರು ದೇವಸ್ಥಾನಕ್ಕೆ ಹೋಗಲೇ ಇಲ್ಲ. ಆ ದಿನವೆಲ್ಲ ಕಳೆಯಿತು. ಆಂಡಾಳು ದುಃಖದಿಂದ ಸೊರಗಿ ನಿದ್ದೆಹೋದಳು. ಪೆರಿಯಾಳ್ವಾರರೂ ನಿದ್ದೆಹೋದರು ; ಕನಸು ಕಂಡರು. ಅರ್ಚಾ ಮೂರ್ತಿಯಾದ ಪರಮಾತ್ಮನು ಅವರಿಗೆ ಕಾಣಿಸಿಕೊಂಡು 'ಈ ದಿನ ನನಗೆ ಪೂಮಾಲೆಯನ್ನೇಕೆ ಅರ್ಪಿಸಲಿಲ್ಲ' ವೆಂದು ಕೇಳಲು ಪೆರಿಯಾಳ್ವಾರರು 'ನನ್ನ ಮಗಳಾದ ಗೋದಾ ದೇವಿಯು ಅದನ್ನು ಮೊದಲೇ ಮುಡಿದಿದ್ದಳಾದ್ದರಿಂದ ನಾನು ತರಲಿಲ್ಲ' ಎಂದುತ್ತರವಿತ್ತರು. ಆಗ ಪರಮಾತ್ಮನು 'ಅವಳು ಮುಡಿಯುವುದರಿಂದಲೇ ಅದು ತನಗೆ ಸುವಾಸನೆ ಉಳ್ಳದ್ದೂ ಪ್ರಿಯವೂ ಆಗುವುದರಿಂದ ಇನ್ನುಮೇಲೆ ಅವಳು ಮುಡಿದ ಹೂಗಳನ್ನೇ ತನಗೆ ಅರ್ಪಿಸಬೇಕು' ಎಂದು ಹೇಳಿ ಅಂತರ್ಧಾನನಾದನು. ಮಾರನೆಯ ದಿನ ಮನೆಯಲ್ಲಿನ ಕೋಲಾ ಹಲ ಕೇಳಬೇಕೆ ? ತಂದೆ ಮಕ್ಕಳ ಬಿಕ್ಕಟ್ಟು ಹರಿಯಿತು. ಆನಂದ ಬಾಷ್ಪಗಳ ಮಳೆ ಸುರಿಯಿತು. ಕೃಷ್ಣನಲ್ಲಿದ್ದ ಭಕ್ತಿಯು ಪ್ರೇಮದ ರೂಪವನ್ನು ತಾಳಿತು.

ನಾರದ ಭಕ್ತಿಸೂತ್ರಗಳ ಉಪದೇಶದಂತೆ ಭಕ್ತಿ ಎನ್ನು ವುದು ಪರಮಾತ್ಮನಲ್ಲಿ ಪರಮ ಪ್ರೇಮರೂಪವಾದದ್ದು, ಅಮೃತ ಸ್ವರೂಪವಾದದ್ದು. ಅದನ್ನು ಪಡೆದ ಮಾನವನು ಸಿದ್ಧನಾಗು ವನು, ಅಮೃತನಾಗುವನು, ತೃಪ್ತನಾಗುವನು ; ಇನ್ನೇನನ್ನೂ ಬಯಸನು. ಅವನಿಗೆ ಶೋಕವಿಲ್ಲ, ದ್ವೇಷವಿಲ್ಲ, ಪರಮಾತ್ಮನ ಹೊರತು ಬೇರೊಂದರಲ್ಲಿ ರಮಿಸನು, ಬೇರೊಂದರಲ್ಲಿ ಉತ್ಸಾಹಿ ಯಾಗನು. ಪರಮಾತ್ಮನಲ್ಲಿ ಅನುರಾಗಜನಿತವಾದ ಅನು ಭವದಿಂದ ಮತ್ತನಾಗುವನು, ಸ್ತಬ್ಧನಾಗುವನು, ಆತ್ಮಾರಾಮ ನಾಗುವನು. ನಾರದ ಭಕ್ತಿಸೂತ್ರಗಳ ಈ ವಿವರಣೆ ಎಲ್ಲ ಆಳ್ವಾರಿಗೂ ಅನ್ವಯಿಸುವುದು. ಆಂಡಾಳಿಗಂತೂ ಇದು ವಿಶೇಷ ರೀತಿಯಲ್ಲಿ ಅನ್ವಯಿಸುವುದು. ಇವಳದು ಗೋಪಿಯರಿಗೆ

ಶ್ರೀಕೃಷ್ಣನಲ್ಲಿ ಹುಟ್ಟಿದಂಥ ಅನುರಕ್ತಿ. ಕೃಷ್ಣ ವಿರಹವನ್ನು ಸಹಿಸಲಾರದ ಗೋಪಕನ್ನಿಕೆಯರಂತೆ ಭಗವಂತನಲ್ಲಿ ಇವಳ ಹಂಬಲು ಹೆಚ್ಚುತ್ತಾ ಬಂತು. ಹೀಗೆ ಭಕ್ತಿಯು ಪ್ರೇಯಸಿಯ ಪ್ರೇಮರೂಪವನ್ನು ತಾಳಿತು. ತಾನು ಗೋಪಿಯೆಂದು ಭಾವಿಸಿಕೊಂಡು ಶ್ರೀಕೃಷ್ಣನಲ್ಲಿ ಸಾಯುಜ್ಯವನ್ನು ಬಯಸುತ್ತಾ ಅವಿವಾಹಿತಳಾಗಿ ಪರಮಾತ್ಮನೇ ತನ್ನ ಪತಿ ಎಂಬ ಭಾವನೆಯಲ್ಲಿ ತನ್ನ ಆಯುಷ್ಯವನ್ನು ಕಳೆದಳು. ಭಗವತ್ಪ್ರೇಮದಿಂದ ತುಂಬಿದ ಈ ನಾರೀಹೃದಯದಿಂದ ಹೊರಹೊಮ್ಮಿದ ಪದವೇ "ತಿರುಪ್ಪಾವೈ" ಎಂಬುದು. ಇದರ ಮೂವತ್ತು ಪದ್ಯಗಳನ್ನು ಧನುರ್ಮಾಸದ ಮೂವತ್ತು ದಿನಗಳೂ ಮುಂಜಾನೆಯಲ್ಲಿ ಊರಿನ ದಾರಿಗಳಲ್ಲಿ ಭಜನೆ ಮಾಡಿಕೊಂಡು ದೇವಸ್ಥಾನಕ್ಕೆ ಹೋಗಿ ತಲಪುವ ಪದ್ಧತಿ ಇದೆ. ಈಗಲೂ ಇದನ್ನು ತಮಿಳುನಾಡಿನಲ್ಲಿ ಕಾಣಬಹುದು. "ನಾಚ್ಚಿಯಾರ್ ತಿರುಮೊಳಿ" ಎಂಬುದು ಈಕೆ ರಚಿಸಿದ ಇನ್ನೊಂದು ಕೃತಿ. ಈಕೆಯು ಶ್ರೀರಂಗಕ್ಕೆ ರಂಗನಾಥನ ದರ್ಶನಕ್ಕಾಗಿ ಹೋಗಿ ಅಲ್ಲಿ ಐಕ್ಯವಾದಳೆಂದು ಪ್ರತೀತಿ ಇದೆ.

ತಿರುಪ್ಪಾವೈ ಪದ್ಯದಲ್ಲಿ ಆಂಡಾಳ್ ತಾನೊಬ್ಬಳು ಗೋಪಿಯೆಂದು ಭಾವಿಸಿಕೊಂಡಿರುವಳು. ಈ ಗೋಪಿಯು ಮುಂಜಾನೆ ಎದ್ದು ತನ್ನ ಸಖಿಯರನ್ನು ಒಬ್ಬೊಬ್ಬರನ್ನಾಗಿ ನಿದ್ದೆಯಿಂದ ಎಬ್ಬಿಸಿ, ನಿದ್ರೆಯಲ್ಲಿರುವ ಶ್ರೀಕೃಷ್ಣನನ್ನು ಎಬ್ಬಿಸೋಣ ಬನ್ನಿರೆಂದು ಕರೆಯುವಳು. ಈ ಪದ್ಯಗಳಲ್ಲಿ ಭಕ್ತಿ ಪ್ರೇಮಗಳ ಜೊತೆಗೆ ಆ ಕಾಲದ ಹಳ್ಳಿಗರ ಬಾಳಿನ ಸೊಗಸನ್ನು ಕಾಣುತ್ತೇವೆ.

ತಿರುಪ್ಪಾವೈ ಕೃತಿಯ ಮೂರನೆಯ ಪದ್ಯದಲ್ಲಿ ಆಂಡಾಳ್ ಈ ರೀತಿ ಹಾಡಿರುವಳು :

> ಮುಗಿಲನವರೆಗೆ ತನ್ನೊಡಲನು ನೀಡಿ ಲೋಕಗಳನ್ನಳೆದ ಪುರುಷೋತ್ತಮನ ನಾಮವನು ಪಾಡಿ ನಾವೆಲ್ಲರೂ ಒಡವೆರೆದು ನೀರಾಡಿದರೆ, ಇದು ನಮ್ಮ ವ್ರತವೆಂದೆಣಿಸಿದರೆ, ತಿಂಗಳಿಗೆ ನಾಡಲ್ಲ ಮೂರು ಮಳೆ ಹುಯ್ದು ಕೆನ್ನೆಲ್ಲು ಪೈರಿನಲಿ ನೀರಿನಲಿ ಚಿಮ್ಮುವುವು ಸೊಗಯಿಪ ಮೀನುಗಳು; ದುಂಬಿಗಳು ಅರೆಬಿರಿದ ಹೂಗಳಲಿ ನಿದ್ದೆ ಹೋಗುವುವು;

ಸೊಂಪಾಗಿ ಬೆಳೆದ ಆಕಳು ಕೊಡ ತುಂಬುವನಿತು ಹಾಲನ್ನು
ಕರೆಯುವುವು; ಮುಗಿಯದ ಸಮೃದ್ಧಿ ನಾಡಿನಲಿ ತುಂಬು
ವುದು—ಏಲೋರೆಂಬಾವಾಯ್!

'ಏಲೋರೆಂಬಾವಾಯ್' ಎಂಬುದು "ತಿರುಪ್ಪಾವೈ" ಕೃತಿಯ ಮೂವತ್ತು ಹಾಡುಗಳ ಪಲ್ಲವಿ.

ಕಾಲಕಾಲಕ್ಕೆ ಮಳೆ ಹುಯ್ದರೆ ಆಗುವ ಸಂತೋಷವನ್ನೂ ಬರಬೇಕಾದ ಮಳೆಯನ್ನು ನಿರೀಕ್ಷಿಸುವ ಆದರವನ್ನೂ ಈ ಪದ್ಯದಲ್ಲಿ ಕಾಣುತ್ತೇವೆ. ಇದು ತಿರುಪ್ಪಾವೈಕೃತಿಯ ನಾಲ್ಕನೆಯ ಪದ್ಯ:

ಮಳೆಯ ಒಡೆಯಾ ಇನಿತು ನಮ್ಮ ಕೈಯ ಬಿಡಬೇಡ. ಕಡಲೊಳು
ಹೊಕ್ಕು ನೀರನು ಹೀರಿ ಗುಡುಗಿ ಬಾನೆಲ್ಲವ ತುಂಬು.
ನಮ್ಮೊಡೆಯನ ಒಡಲಂತೆ ನಿನ್ನ ಮೈ ಶ್ಯಾಮಲ ವರ್ಣ
ವಾಗಲಿ, ನಮ್ಮೊಡೆಯನ ತೋಳಿನಲಿ ಬೆಳಗುವ ಚಕ್ರದಂತೆ
ನಿನ್ನ ಮಿಂಚು ಮಿಂಚಲಿ, ನಮ್ಮೊಡೆಯನ ಬಲಮುರಿ ಶಂಖ
ದಂತೆ ನಿನ್ನ ಗುಡುಗು ಮೊಳಗಲಿ. ಇನ್ನು ತಾಳದೆ
ಸ್ವಾಮಿಯ ಬಿಲ್ಲಿನಿಂದ ಚಿಮ್ಮಿದ ಶರಮಳೆಯನು ಹೋಲು
ವಂತ ಮಳೆಹುಯ್ದು ಲೋಕವನು ಬಾಳಿಸು. ನಾವುಗಳು
ಮಾರ್ಗಳಿ ತಿಂಗಳಲಿ ನೀರಾಡಿ ಮುದಿಸಿ ನಮ್ಮ ವ್ರತವನು
ಮುಗಿಸುವೆವು—ಏಲೋರೆಂಬಾವಾಯ್!

ತನ್ನ ಗೆಳತಿಯರನ್ನು ಶ್ರೀಕೃಷ್ಣನ ದರ್ಶನಕ್ಕೆ ಬನ್ನಿರೆಂದು ಕರೆಯುವ ರೀತಿ ಬಹು ಮನೋಹರವಾಗಿದೆ. ಈ ಪದ್ಯಗಳ ಅನುವಾದವನ್ನು ಶ್ರೀಮಾನ್ ವ. ಶ್ರೀರಂಗಾಚಾರ್ಯರು ದೇಶೀಯ ವಿದ್ಯಾಶಾಲಾ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಆದ ರಿಂದ ಕೆಲವು ಮಾತುಗಳನ್ನು ತೆಗೆದು ಇಲ್ಲಿ ಉದಾಹರಿಸಿದೆ:

"ಕಮ್ಮನೆ ಪರಿಮಳಿಸುವ ಕುರುಳ ಹೆಣ್ಣೇ ಬಾಗಿಲು ತರೆ.
ಎಲ್ಲೆಲ್ಲೂ ಕೋಳಿ ಕರೆಯುತ್ತಿದೆ.
ಮಾಧವೀಲತೆಯ ಹಂದರದ ಮೇಲೆ ಕುಳಿತು ಕೋಗಿಲೆ ಹಲಬಾರಿ
ಕೂಗುತಿದೆ."

ಮತ್ತೊಬ್ಬಳನ್ನು ಕುರಿತು—

"ಆಟದ ಚೆಂಡನ್ನು ಹಿಡಿದ ಬೆರಲ ಓ ಸುಂದರಿ
ನಿನ್ನ ಪ್ರಿಯನ ಹೆಸರನ್ನು ಹೊಗಳಲು ಬಂದಿದ್ದೇವೆ.

ಕೆಂದಾವರೆಯ ಕೈಯಿಂದ
ತುಂಬು ಸಂಪತ್ತಿನ ಕಂಕಣ ಘುಲಿಯುವಂತೆ •
ಸಂತೋಷದಿಂದ ಬಂದು ಈ ಬಾಗಿಲ ತೆರೆಯೇ.

ಹೀಗೆ ಒಬ್ಬೊಬ್ಬರನ್ನಾಗಿ ಗೆಳತಿಯರನ್ನು ತನ್ನೊಡನೆ ಕರೆದು ಕೊಂಡು ಶ್ರೀಕೃಷ್ಣನ ಸನ್ನಿಧಿಗೆ ಬಂದು ಬಾಗಿಲಲ್ಲಿ ನಿಂತು ಪ್ರೇಮ ಭಿಕ್ಷೆಯನ್ನು ಈ ರೀತಿ ಬೇಡುವಳು :

"ಹೊತ್ತು ಹುಟ್ಟುವ ಮುನ್ನ ಬಂದು ನಿನ್ನನ್ನು ಸೇವಿಸಿ
ನಿನ್ನ ಹೊಂದಾವರೆಯಡಿಯನ್ನು ಹೊಗಳುವವರ ಭಾವವೇ
ನೆಂದು ಕೇಳು.
ದನಕಾಯ್ದು ಜೀವಿಸುವವರ ಕುಲದಲ್ಲಿ ಹುಟ್ಟಿದ ನೀನು
ಸೇವಕರಾದ ನಮ್ಮನ್ನು ಅಂಗೀಕರಿಸದೆ ಹೋಗಲಾಗದು.
ಸುಮ್ಮನೆ ಕೂಗಾಡಿ ಹೋಗುವವರಲ್ಲ ನಾವು ಗೋವಿಂದಾ,
ಇನ್ನೆಲ್ಲ ಕಾಲಕ್ಕೂ ಏಳೇಳು ಜನ್ಮಕ್ಕೂ
ನಿನ್ನ ಒಳಪಟ್ಟವರಾಗಿರತಕ್ಕವರು ನಾವು. ನಿನಗೇ ನಾವು
ಆಳಾಗಿರತಕ್ಕವರು.
ಮತ್ತೇನಾದರೂ ಕಾಮನೆಗಳಿದ್ದರೆ ಅವು ನಶಿಸಲಿ."

ತಾನು ವರಿಸಿದ ಪತಿಯು ಹರಿ ಎಂಬುದನ್ನೂ ಹರಿಗೂ ತನಗೂ ಇರುವ ಆಂತರಂಗಿಕ ಪ್ರೇಮಸಂಬಂಧವೇನೆಂಬುದನ್ನೂ ಈ ಒಂದು ಪದ್ಯದಲ್ಲಿ ಹೊರಸೂಸಿರುವಳು. ಅದನ್ನು 'ಶ್ರೀನಿವಾಸ' ರು ಹೀಗೆ ಅನುವಾದ ಮಾಡಿರುವರು :

ಕುಂಕುಮ ಪೂಸಿಕೊಂಡು ತಣ್ಣಗಂಧವ ತೀಡಿ
ಮಂಗಳವಾಗಿ ಬೀದಿ ತಿರುಗಿ ಅಲ್ಲಲ್ಲಿ
ಅವನೊಡನೆ ಆನೆಯನು ಏರಿ ಓಕುಳಿಯಾಡಿ
ಜಳಕ ಮಾಡಿದನೆಂಬ ಕನಸು ಕಂಡೆನೆ ಕೆಳದೀ.

ಈ ಪದ್ಯಗಳು ಪರಿಶುದ್ಧಾಂತಃಕರಣಳಾಗಿ ಪ್ರೀತಿಪುರಸ್ಸರವಾಗಿ ಪರಮಾತ್ಮನ ಚರಣಸನ್ನಿಧಿಯಲ್ಲಿ ಆಂಡಾಳ್ ಸಮರ್ಪಿಸಿದ ಹೂಗಳಂತಹವು. ಇವು ತಾನು ಮುಡಿದು ಅವನಿಗೆ ಮುಡಿಸಿದವು. ಇದರಿಂದ ಆಂಡಾಳಿಗೆ ಶೂಡಿಕೊಡುತ್ತನಾಚ್ಚಿಯಾರ್ ಎಂದು ಹೆಸರು ಬಂತು. ಅಂದರೆ ತಾ ಮುಡಿದು ಕೊಟ್ಟ

ನಾಯಕಿ. ಈ ಭಕ್ತಳ ಪವಿತ್ರಜೀವನವನ್ನು ಕನ್ನಡ ಶಿವಶರಣೆಯಾದ ಮಹಾದೇವಿಯಕ್ಕನ ದಿವ್ಯ ಪುಣ್ಯಜೀವನಕ್ಕೆ ಹೋಲಿಸಬಹುದು.

## ೭. ತೊಂಡರಡಿಪ್ಪೊಡಿಯಾಳ್ವಾರ್

ಪೆರಿಯಾಳ್ವಾರರಂತೆಯೇ ಶ್ರೀರಂಗನಾಥನ ಪುಷ್ಪಮಾಲಾ ಕೈಂಕರ್ಯದಲ್ಲಿ ತಮ್ಮ ಜೀವನವನ್ನು ಸಾಗಿಸಿದ ಭಕ್ತರು ತೊಂಡರಡಿಪ್ಪೊಡಿಯಾಳ್ವಾರ್ ಎಂಬವರು ; ಸಂಸ್ಕೃತದ ಹೆಸರುಗಳು ಭಕ್ತಾಂಘ್ರಿರೇಣು ಮತ್ತು ವಿಪ್ರನಾರಾಯಣ ಎಂಬುವು. ಇವರು ಮಂಡಂಗುಡಿ ಎಂಬ ಊರಿನಲ್ಲಿ ಹುಟ್ಟಿದರು ; ಜಾತಿಯಲ್ಲಿ ಬ್ರಾಹ್ಮಣರು. ಇವರ ಪಾಂಡಿತ್ಯವು ಅತಿಶಯವಾದದ್ದಾಗಿತ್ತು ; ವೇದ ವೇದಾಂಗಗಳಲ್ಲಿ ಪಾರಂಗತರಾಗಿದ್ದರು. ಚಿಕ್ಕಂದಿನಿಂದಲೂ ವೈರಾಗ್ಯ ಮನೋವೃತ್ತಿಯುಳ್ಳವರಾದ್ದರಿಂದ ಮದುವೆಯಾಗದೆ ನೈಷ್ಠಿಕ ಬ್ರಹ್ಮಚರ್ಯದಲ್ಲಿದ್ದು ಶಾಸ್ತ್ರಾಭ್ಯಾಸದಲ್ಲಿಯೂ ಇತರ ಭಗವತ್ಕೈಂಕರ್ಯದಲ್ಲಿಯೂ ನಿರತರಾಗಿದ್ದರು. ಇವರು ಒಮ್ಮೆ ಶ್ರೀರಂಗಕ್ಕೆ ಶ್ರೀರಂಗನಾಥನ ದರ್ಶನಕ್ಕೆ ಬಂದರು. ಸ್ವಲ್ಪದಿವಸ ಶ್ರೀರಂಗದ ಸಮೀಪದಲ್ಲಿ ತಿರುಕ್ಕರಂಬನೂರ್ ಎಂಬ ಊರಿನಲ್ಲಿ ನೆಲೆಯಾಗಿ ನಿಂತು ಅಲ್ಲಿ ಹೂದೋಟ ಒಂದನ್ನು ಮಾಡಿಕೊಂಡು ವಾಸಮಾಡುತ್ತಿದ್ದರು.

ಆ ಊರಿನ ವೇಶ್ಯೆಯಾದ ದೇವದೇವಿಯೆಂಬವಳು ಅವರ ತೋಟಕ್ಕೆ ಬಂದು ದೇವರಿಗೆಂದು ಹೂ ಕೊಯ್ದುಕೊಂಡು ಹೋಗುತ್ತಿದ್ದಳು. ಇವಳು ಬಹಳ ಸುಂದರಿ ಎಂದು ಪ್ರಸಿದ್ಧಳಾಗಿದ್ದಳು. ಇವಳೂ ಇವಳ ತಂಗಿಯೂ ಪ್ರತಿದಿನವೂ ತೋಟಕ್ಕೆ ಬಂದು ಹೂಗಳನ್ನು ಕೊಯ್ದುಕೊಂಡು ಹೋಗುವ ವಾಡಿಕೆ ಇತ್ತು. ಒಂದು ದಿನ ತೋಟದಲ್ಲಿ ತಿರುಗಿ ಆಯಾಸದಿಂದ ಅವಳೂ ಅವಳ ತಂಗಿಯೂ ಒಂದು ಮರದ ನೆರಳಲ್ಲಿ ಕುಳಿತು ವಿನೋದದಿಂದ ಮಾತನಾಡುತ್ತಿದ್ದರು. ತೊಂಡರಡಿಪ್ಪೊಡಿಯಾಳ್ವಾರರು ಭಗವಂತನ ದಿವ್ಯನಾಮಗಳನ್ನು ಅನು

ಸಂಧಾನಮಾಡುತ್ತಾ ತಮ್ಮ ತೋಟದ ಮನೆಯಿಂದ ಹೊರ ಹೊರಟು ಹೂಗಿಡಗಳ ಬಳಿಗೆ ಬಂದು ಪಾತೆಮಾಡುವುದಕ್ಕೆ ತೊಡ ಗಿದರು. ತೇಜಸ್ವಿಯೂ ಪ್ರಾಯದ ಸಿರಿಯಿಂದ ತುಂಬಿದ ಮನೋಹರ ರೂಪವುಳ್ಳವರೂ ಆದ ಇವರನ್ನು ನೋಡಿ ದೇವ ದೇವಿಗೆ ಅನುರಾಗ ಹುಟ್ಟಿತು. ಅವರಂತೂ ಈ ಹೆಂಗಸರು ಅಲ್ಲಿ ರುವುದನ್ನು ಗಮನಿಸದೆ ತಮ್ಮಷ್ಟಕ್ಕೆ ತಾವು ಕಣ್ಣೆತ್ತಿನೋಡದೆ ತಮ್ಮ ತೋಟದ ಕೆಲಸದಲ್ಲಿ ನಿರತರಾಗಿದ್ದರು. ಇದುವರೆಗೂ ತನ್ನ ಸೌಂದರ್ಯಕ್ಕೆ ಮರುಳಾಗದ ಗಂಡಸರೇ ಇರಲಿಲ್ಲ; ತೊಂಡರಡಿ ಪ್ಪೊಡಿಯಾಳ್ವಾರರ ಉದಾಸೀನವರ್ತನೆಯು ಇವಳಿಗೆ ಆಶ್ಚರ್ಯ ವನ್ನುಂಟುಮಾಡಿತು. ಆದರೆ ಅವರ ಸಹವಾಸವನ್ನು ಬಯಸಿ ದ್ದಾಯಿತು; ತಾನು ಕೈಕೊಂಡ ಉದ್ದೇಶ ನೆರವೇರಲೇಬೇಕೆಂಬ ಹಠ ಹಿಡಿದಳು. ತನ್ನ ತಂಗಿಯು ಆ ಕೆಲಸ ಅವಳಿಂದಾಗದೆಂದು ಹಂಗಿಸಿದರೂ ಕೇಳದೆ ಅವರಿದ್ದೆಡೆಗೆ ಸರಸರನೆ ಬಂದು ಅವರ ಕಾಲಿಗೆ ಬಿದ್ದಳು. ಅವರು, "ಮಗಳೇ! ನೀನಾರು, ನನ್ನಿಂದ ನಿನಗಾಗಬೇಕಾದುದೇನು" ಎಂದು ಕೇಳಿದರು. "ಸ್ವಾಮಿ! ನಾನು ಈ ಊರಿನ ವೇಶ್ಯೆ. ವೇಶ್ಯೆಯ ಜೀವನವು ನನಗೆ ಬೇಸರ ವಾಗಿದೆ. ನನ್ನ ಬಾಳು ಮೇಲಾಗಬೇಕೆಂದು ಆಶೆ. ನಿಮ್ಮಂಥ ಯೋಗಿಗಳನ್ನು ಆಶ್ರಯಿಸಿದರೆ ನನ್ನ ಜನ್ಮ ಸಾರ್ಥಕವಾಗು ವುದೆಂದು ನಿಮ್ಮಲ್ಲಿಗೆ ಬಂದೆ. ನಿಮ್ಮ ಕೃಪಾಕಟಾಕ್ಷವನ್ನು ನನ್ನ ಮೇಲೆ ಬೀರಿ ಪತಿತಳಾದ ನನ್ನನ್ನು ಉದ್ಧಾರಮಾಡಬೇಕು; ಶ್ರೀರಂಗನಾಥನ ಕೈಂಕರ್ಯದಲ್ಲಿ ನನ್ನ ಬದುಕನ್ನು ಸವೆಸಲು ಸಿದ್ಧಳಿದ್ದೇನೆ; ತೋಟದ ಕೆಲಸಮಾಡಿಕೊಂಡು ಪುಷ್ಪ ಕೈಂಕರ್ಯ ದಲ್ಲಿ ನಿಮ್ಮ ಸೇವೆಯನ್ನು ಮಾಡಿಕೊಂಡಿರುತ್ತೇನೆ; ನೀವು ಅದಕ್ಕೆ ಅನುಮತಿಯನ್ನು ಕೊಡಬೇಕು" ಎಂದು ವಿನಂತಾಗಿ ದೇವದೇವಿಯು ಕೇಳಿಕೊಂಡಳು. ಅವರು ಹಾಗೆಯೇ ಆಗಬಹು ದೆಂದು ಒಪ್ಪಿಕೊಂಡರು. ದೇವದೇವಿಯು ಆರು ತಿಂಗಳ ಕಾಲ ಒಂದೇ ಸಮನೆ ದುಡಿಯುತ್ತಾ ಭಕ್ತರ ಮೆಚ್ಚುಗೆಯನ್ನು ಪಡೆದಳು. ಇವಳು ಹೀಗೆ ದುಡಿಯುತ್ತಿದ್ದುದು ತಮ್ಮ ಮೇಲಿನ ಪ್ರೇಮಕ್ಕಾಗಿ

ಎಂದು ಅವರಿಗೆ ತಿಳಿದಿರಲಿಲ್ಲ. ಅದು ನಿಜವಾದ ವೈರಾಗ್ಯವೆಂದೇ ಭಾವಿಸಿದ್ದರು.

ಹೀಗಿರಲು ಒಂದು ದಿನ ಇವಳು ತೋಟದಲ್ಲಿ ದುಡಿಯುತ್ತಿದ್ದಾಗ ದೊಡ್ಡ ಮಳೆ ಬಂತು. ಕೈಂಕರ್ಯಕ್ಕೆ ಭಂಗಬರಬಾರದೆಂದು ಮಳೆಯಲ್ಲಿಯೇ ಅವಳು ನೆನೆಯುತ್ತಿದ್ದುದ್ದನ್ನು ಕಂಡು ಭಕ್ತರಿಗೆ ಮನಮರುಗಿತು. ಗುಡಿಸಿಲಿನೊಳಕ್ಕೆ ಬಂದು ಮಳೆಯು ನಿಂತಮೇಲೆ ಹೋಗಬಹುದೆಂದು ಕೂಗಿ ಹೇಳಿದರು. ದೇವದೇವಿಯು ತೊಯ್ದ ಬಟ್ಟೆಯಿಂದ ಹಾಗೆಯೇ ಬಂದಳು. ಅವಳ ಸ್ಥಿತಿಯನ್ನು ನೋಡಿ ಅವಳು ಉಡುವುದಕ್ಕೆ ಒಣಗಿದ ಬಟ್ಟೆಗಳನ್ನು ಕೊಟ್ಟರು. ಹೊರಗೆ ಮಳೆ ನಿಲ್ಲಲಿಲ್ಲ. ಗುಡಿಸಿಲಿನಲ್ಲಿ ಇವರಿಬ್ಬರೇ ಉಳಿದುಕೊಂಡರು. ಬಹಳ ವಿನಯದಿಂದ ಅವರ ಪಾದಗಳಿಗೆರಗಿ "ಸ್ವಾಮಿ ! ನಿಮಗಾಗಿಯೇ ಮೀಸಲಾಗಿರುವ ಈ ತನುವನ್ನು ಸ್ವೀಕರಿಸಿ, ನಿಮ್ಮ ಸೇವೆಯಲ್ಲಿ ಈ ನನ್ನ ಬದುಕನ್ನು ಉತ್ತಮಗೊಳಿಸಿ" ಎಂದು ಅವರ ಪಾದಗಳನ್ನು ತನ್ನ ಮೃದುವಾದ ಕೈಗಳಿಂದ ಎತ್ತಿ ಕಣ್ಣಿಗೆ ಒತ್ತಿಕೊಂಡಳು, ಮುದ್ದಿಟ್ಟಳು. ಭಗವಂತನಲ್ಲಿ ತಲ್ಲೀನವಾಗಿದ್ದ ಅವರ ಅದ್ಭುತಪ್ರೇಮವು ಮೆಲ್ಲಮೆಲ್ಲನೆ ದೇವದೇವಿಯ ಕಡೆಗೆ ತಿರುಗಿತು. ಹೆಂಗಸಿನ ಸ್ಪರ್ಶವನ್ನೇ ಕಾಣದ ತೊಂಡರಡಿಪ್ಪೊಡಿಯಾಳ್ವಾರರಿಗೆ ಮನಸ್ಸಿನಲ್ಲಿ ವಿಕಾರ ತಲೆದೋರಿತು. ತಮ್ಮಲ್ಲಿ ವಿದ್ಯುದ್ವೇಗದಿಂದಾಗುತ್ತಿದ್ದ ಪರಿಣಾಮವನ್ನು ಚಿಂತಿಸಲು ಕೂಡ ಅಶಕ್ತರಾಗಿ ಅವಳ ಪ್ರೇಮದ ಕುಣಿಕೆಗೆ ಸಿಕ್ಕಿಬಿಟ್ಟರು.

ಭಕ್ತರ ದಾರಿ ಅಂದಿನಿಂದ ಬೇರೆಯಾಯಿತು. ದೇವರಿಗಾಗಿ ಬೆಳೆಸಿದ ಹೂವೆಲ್ಲ ದೇವದೇವಿಗೆ ಮುಡಿಸುವುದಕ್ಕಾಯಿತು. ಅವಳಿಗೆ ತನ್ನ ಸೇವೆಯನ್ನು ಸಲ್ಲಿಸಲು ಮೊದಲಾಯಿತು. ದೇವದೇವಿಯು ಆತನೊಡನೆ ಕೆಲವು ತಿಂಗಳು ಸುಖವಾಗಿ ಕಾಲಕಳೆದಳು. ಇವಳಿಗಾಗಿ ವಿಪ್ರನಾರಾಯಣನು ಲೋಕನಿಂದೆಯನ್ನು ಸಹಿಸಿದನು. ಬರುಬರುತ್ತಾ ವಿಪ್ರನಾರಾಯಣನಲ್ಲಿ ದೇವದೇವಿಗೆ ಜಿಗುಪ್ಸೆ ಹುಟ್ಟಿತು. ತನ್ನಲ್ಲಿದ್ದುದ್ದನ್ನೆಲ್ಲ

ವನ್ನೂ ಅವಳಿಗೇ ಕೊಟ್ಟುಬಿಟ್ಟು ಕಡುಬಡವನಾಗಿ ಅವಳ ಆಶ್ರಯ ದಲ್ಲಿರತೊಡಗಿದುದೇ ಇದಕ್ಕೆ ಕಾರಣವಾಯಿತು. ಇವಳ ದೆಸೆ ಯಿಂದ ವಿಪ್ರನಾರಾಯಣನಿಗೆ ಅರಮನೆಯಲ್ಲಿ ಚಿನ್ನದ ಬಟ್ಟಲು ಕದ್ದ ಅಪವಾದವೂ ಬಂತು. ದೇವದೇವಿಯು ಇವನನ್ನು ತೊರೆ ದಳು. ವಿಪ್ರನಾರಾಯಣನು ಪಶ್ಚಾತ್ತಾಪಕ್ಕೀಡಾಗಿ ಎಂತಹ ದಿವ್ಯ ವೈರಾಗ್ಯ ಜೀವನವನ್ನು ತೊರೆದು ಹೆಂಗಸೊಬ್ಬಳಿಗಾಗಿ ಬದುಕನ್ನು ಮಣ್ಣುಗೂಡಿಸಿದೆನೆಂದು ಮನದಲ್ಲೇ ಮರುಗಿದನು. ಹಿಂದಿದ್ದ ವೈರಾಗ್ಯವು ಪುನಃ ಈತನಲ್ಲಿ ತಲೆದೋರಿತು. ದೇವದೇವಿಯು ಸೂರೆಗೊಂಡ ಈತನ ಪ್ರೇಮವು ಮತ್ತೆ ರಂಗ ನಾಥನ ಕಡೆಗೆ ತಿರುಗಿತು. ದೇವದೇವಿಯಲ್ಲಿ ದಾಸನಾಗಿ ಮನ ನೊಂದ ಈತನು ಭಕ್ತರ ಭಾಗವತರ ದಾಸನಾದನು. ಆದ್ದರಿಂದ ಲೇ ಭಕ್ತಾಂಘ್ರಿರೇಣು ಎಂದು ಈತನ ಹೆಸರಾಯಿತು. ಇದನ್ನು ನೋಡಿ ದೇವದೇವಿಯು ಮರುಗಿದಳು. ವಿಪ್ರನಾರಾಯಣನಂತೆ ತಾನೂ ಭಕ್ತಳಾಗಲಿಚ್ಛಿಸಿ ತನ್ನ ಸರ್ವಸ್ವವನ್ನೂ ಶ್ರೀರಂಗನಾಥ ನಿಗೆ ಸಮರ್ಪಿಸಿ ಸಂನ್ಯಾಸಿನಿಯಾದಳೆಂದು ಪ್ರತೀತಿ ಇದೆ. ತೊಂಡ ರಡಿಪ್ಪೊಡಿಯಾಳ್ವಾರರು ತಮ್ಮ ಭಗವದನುಭವಜನಿತ ಪ್ರೀತ್ಯತಿ ಶಯವನ್ನು ತಿರುಮಾಲೈ, ತಿರುಪ್ಪಳ್ಳಿಯೆಳುಚ್ಚಿ ಎಂಬ ಪದ್ಯಗಳಲ್ಲಿ ಹಾಡಿರುವರು.

ತಿರುಪ್ಪಳ್ಳಿಯೆಳುಚ್ಚಿ ಕೃತಿಯ ಕೆಲವು ಪದ್ಯಗಳಿಗೆ 'ಶ್ರೀನಿ ವಾಸ'ರ ಅನುವಾದವನ್ನು ಇಲ್ಲಿ ಕೊಟ್ಟಿದೆ :

ಕೊಬು ಕೊಡಿ ಮೊಲ್ಲೆಯ ತುಂಬು ಮಲರನು ಅಪ್ಪಿ
ಬೀಸುತಿದೆ ಇದೊ ನೋಡು ಮೂಡಣದ ಮಾರುತ ;
ಹೂವಿನಾಶ್ರಯದ ನಿದ್ರೆಯನಂಚೆ ಎಚ್ಚೆತ್ತು
ಇಬ್ಬನಿಗೆ ನೆನೆದ ಚೆಲುಗರಿಯ ಕೆದರುತಿದೆ ;
ಬಿಲದ ಬಾಗಿಲ ತೆರದ ಹಿರಿಯ ಮೊಸಳೆಯ ಬಾಯ
ಬೆಳ್ಳನೆಯ ಕೋರೆಹಲ್ಲಿನ ವಿಷಕೆ ಸಾಗಿದು
ನೊಂದ ಆನೆಯ ಮಿಗಿಲ ದೂಸರನು ಕಳೆದವನೆ.
ಓ ರಂಗನಾಥ ಪಟ್ಟೆದ್ದು ಬಿಜಗೆಯ್ಯ .

ಇರುಳುರುಳಿ ಹಗಲೊಡೆಯುವ ಚಿತ್ರವನ್ನು ಬಹು ಅಂದದಿಂದ ಈ ಪದ್ಯಗಳಲ್ಲಿ ವರ್ಣಿಸಿರುವರು :

ಸೂರಿಯನ ಕರ ಸುತ್ತು ದೆಸೆಗಳಲಿ ಹರಹಿತು ;
ಒತ್ತಾದ ತಾರೆಗಳ ಮಿನುಮಿನುಗು ಸೊರಗಿತು ;
ಪಸರಿಸಿದ ಕಳೆಯು ಹಿಮಕರನು ಮಂಕಾದನಿಕೊ ;
ಹರಡಿದ್ದ ಕತ್ತಲೋಡಿತು ; ಹಸುರು ತೋಟಗಳ
ಕಂಗ ಹೊಂಬಾಳೆಯನು ಅರಳಿಸುತ ಅದರೊಳಗು
ನರುಗಂಪ ಕಾರೆ ಬೆಳಗಿನ ಗಾಳಿ ಬೀಸುತಿವೆ ;
ಬಲು ಹೊಗರನುಗುವ ಚಕ್ರವ ಹಿಡಿದ ಕೈಯುವನೆ
ಓ ರಂಗನಾಥ ಪಟ್ಟೆದ್ದು ಬಿಜಗೆಯ್ಯ.

ಹಗಲಾದಾಗ—

ಮೇಟಿಪಡ್ಡೆಯ ದನವ ಹೊರಗಟ್ಟಿ ಗೋವಳರು
ನುಡಿಸುತಿಹ ಕೊಳಲು ಗೂಳಿಯ ಗಂಟೆಯಾರವ
ಬೆರೆದು ಬರುವೀ ಶಬ್ದ ದೆಸೆಗಳನು ವ್ಯಾಪಿಸಿತು ,
ಜೇನ್ತುಂಬಿ ಬಯಲ ಸಾರಿತು . . .

ಮತ್ತೆ—

ಹೂತೋಟಗಳಿಂದ ಹಕ್ಕಿಗಳು ಹಾಡುತಿವೆ ;
ಹೋಯಿತ್ತು ಇರುಳು, ಬೆಳಕಿದೊ ಬಂದಿವೆ ;
ಘೋಷಿಸುವ ಕಡಲ ರವ ಮೂಡಲನು ತುಂಬಿದೆ ;
ಮದಿಸಿರುವ ತುಂಬಿ ಮೊರೆಯುವ ತಾವರೆಯ ಕೋದ
ಚೆಲುವ ಹೂಮಾಲೆ ಕೈಯಲಿ ಆಡುತಿರೆ ಸುರರು
ನಿನ್ನಡಿಯೊಳಿಡಲು ತಂದಿಹರದನು. ಇಂತಿರಲು
ಲಂಕಾಧಿಪತಿಯ ಕುಲ ಸೇವಿಸುವ ಮಂದಿರದ
ಓ ರಂಗನಾಥ ಪಟ್ಟೆದ್ದು ಬಿಜಗೆಯ್ಯ.

'ಶ್ರೀನಿವಾಸ' ರು ಹೇಳುವಂತೆ "ಕೇವಲ ಸಾಹಿತ್ಯವೆಂದೇ ಬಗೆದರೂ ಈ ಕೃತಿ ಅತ್ಯುತ್ತಮವಾದ ಕವಿತೆ ಎಂದು ಒಪ್ಪಬೇಕು. ಇದರ ನೋಟ ಕವಿಯದು, ಇದರ ಮಾತು ಕವಿಯದು, ಇದರ ಕಲೆ ಸಂಪೂರ್ಣವಾಗಿ ಕಾವ್ಯದ್ದು" (ವಿಮರ್ಶೆ ೪— ಪು. ೧೧೮).

# ೮. ತಿರುಪ್ಪಾಣಾಳ್ವಾರ್

ತಿರುಪ್ಪಾಣಾಳ್ವಾರರು ತೊಂಡರಡಿಪ್ಪೊಡಿಯಾಳ್ವಾರರಂತೆ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಲಿಲ್ಲ; ಅಂತ್ಯಜರಾಗಿ ಹುಟ್ಟಿದರು. ಇವರ ಜನ್ಮಸ್ಥಳ ಉರೈಯೂರ್ ಎಂಬುದು. ಈ ಭಕ್ತರು ಗಾನ ಪ್ರಿಯರು. ಗುರುಪರಂಪರಾಪ್ರಭಾವದಲ್ಲಿ ಇವರನ್ನು "ಭಗವ ದ್ಗಾನವಿದ್ಯೆಯ ಸಾರ್ವಭೌಮ" ರೆಂದು ಕರೆದಿದೆ. ಸತ್ವಗುಣ ಪ್ರಚುರರಾಗಿಯೂ ಮೋಕ್ಷಾರ್ಥಿಗಳಾಗಿಯೂ ಇದ್ದ ಈ ಭಾಗ ವತರು ಶ್ರೀರಂಗದಲ್ಲಿ ಕಾವೇರಿಯ ತೆಂಕಣ ಕರೆಯಲ್ಲಿ ವಾಸ ಮಾಡಲು ನಿರ್ಣಯಿಸಿ ಅಲ್ಲೊಂದು ಗುಡಿಸಿಲನ್ನು ಕಟ್ಟಿಕೊಂಡಿದ್ದರು. ಇದು ಶ್ರೀ ರಂಗನಾಥನ ದೇವಸ್ಥಾನದ ಕಡೆಗೆ ಬಾಗಿಲು ಮಾಡಿ ಕಟ್ಟಿದ್ದ ಗುಡಿಸಲಾಗಿತ್ತು. ಅಂತ್ಯಜರಾದದ್ದರಿಂದ ಶ್ರೀರಂಗ ನಾಥನ ದರ್ಶನವಂತೂ ದುರ್ಲಭವಷ್ಟೆ. ಆದ್ದರಿಂದ ಅವರು ಧ್ಯಾನಕ್ಕೆ ಕುಳಿತಾಗಲೆಲ್ಲಾ ದೇವಸ್ಥಾನದ ಕಡೆಗೆ ತಿರುಗಿ ಕೂಡುವ ಪದ್ಧತಿ. ನಿರರ್ಗಳವಾಗಿ ಭಕ್ತಿಪ್ರದರ್ಶಕವಾದ ಗೀತಗಳನ್ನು ರಚಿಸಿ ಅವುಗಳನ್ನು ವೀಣಾವಾದ್ಯಸಮೇತ ಹಾಡುತ್ತಿದ್ದರು. ಇವರ ಭಕ್ತ್ಯತಿಶಯವು ಎಲ್ಲರಿಗೂ ತಿಳಿದಿದ್ದಿತು. ಅಂತ್ಯಜರಾ ಗಿದ್ದರೂ ಇವರ ಭಕ್ತಿಯನ್ನು ಎಲ್ಲರೂ ಕೊಂಡಾಡುತ್ತಿದ್ದರು.

ಹೀಗಿರಲು ಒಂದುದಿನ ಒಂದು ವಿಚಿತ್ರ ಘಟನೆ ನಡೆಯಿತು. ಲೋಕಸಾರಂಗರೆಂಬ ವಿಪ್ರೋತ್ತಮರು ಚಿನ್ನದ ಬಿಂದಿಗೆಯನ್ನು ಹೊತ್ತು ಇತರ ಅರ್ಚಕರ ಜೊತೆಯಲ್ಲಿ ಶ್ರೀರಂಗನಾಥನ ತಿರು ಮಜ್ಜನ ಕೈಂಕರ್ಯಕ್ಕೆ ನದಿಯಿಂದ ನೀರು ತರುತ್ತಿದ್ದರು. ರಸ್ತೆಯ ಪಕ್ಕದಲ್ಲಿ ಆಳ್ವಾರರು ಗುಡಿಗೆ ಅಭಿಮುಖವಾಗಿ ಕುಳಿತು ಧ್ಯಾನಪರರಾಗಿದ್ದರು. ಲೋಕಸಾರಂಗ ಮುನಿ ಗಳೊಡನೆ ಇದ್ದ ಅರ್ಚಕನೊಬ್ಬನು ತಿರುಪ್ಪಾಣಿಯನ್ನು ಬೇಗನೆ ದಾರಿ ಬಿಟ್ಟು ಸರಿಯೆಂದು ಕೂಗು ಹಾಕಿದನು. ಭಕ್ತಿಪರವಶತೆಯಿಂದ ಮೈಮರೆತಿದ್ದ ತಿರುಪ್ಪಾಣಿಗೆ ಇದು ಗಮನಕ್ಕೆ ಬರಲಿಲ್ಲ. ಅತ್ತ ಸರಿಯಲೂ ಇಲ್ಲ. ಲೋಕಸಾರಂಗರಿಗೆ ತಾನು ಉತ್ತಮ ಜಾತಿಯವನೆಂಬ ಅಹಂಕಾರವು ಇನ್ನೂ ಉಳಿ

ದಿತ್ತು. ಆದ್ದರಿಂದ ಕೂಗಿದರೂ ಏಳದಿದ್ದುದನ್ನು ನೋಡಿ ಒಂದು ಕಲ್ಲನ್ನು ತಿರುಪ್ಪಾಣಿಯ ಕಡೆಗೆ ಎಸೆದರು. ಅದು ಅವನ ಹಣೆಗೆ ತಗುಲಿ ರಕ್ತ ಸುರಿಯಲು ಮೊದಲಿಟ್ಟಿತು. ಯೋಗಿಯು ಬೆಚ್ಚಿ ಎಚ್ಚರಗೊಂಡನು. ತನ್ನ ಮುಂದೆ ಸ್ವಲ್ಪ ದೂರದಲ್ಲಿ ನಿಂತಿದ್ದ ಲೋಕಸಾರಂಗರನ್ನು ನೋಡಿ ಎಂತಹ ಅಪಚಾರವಾಯಿತೆಂದುಕೊಂಡು ಖಿನ್ನನಾಗಿ ಕ್ಷಮಾಪಣೆಯನ್ನು ಕೇಳುತ್ತಾ ಬೇಗ ಬೇಗನೆ ಹಿಂದಕ್ಕೆ ಸರಿದನು. ಈ ಚರ್ಯೆಯನ್ನು ಕಂಡ ಲೋಕಸಾರಂಗ ಮುನಿಗಳು ಚಿಂತಾ ಕ್ರಾಂತರಾಗಿ ತಮ್ಮ ಕೆಲಸವನ್ನು ಮುಗಿಸಿಕೊಂಡು ಅಂದು ನಡೆದ ಘಟನೆಯನ್ನು ಆಗಾಗ ಸ್ಮರಿಸುತ್ತಾ ಗುಡಿಗೆ ಹಿಂದಿರುಗಿ ದರು. ಆ ದಿನ ನಡೆದ ಭಾಗವತಾಪಚಾರಕ್ಕೆ ಮನನೊಂದರು. ಎಂದಿನಂತೆ ಶ್ರೀರಂಗನಾಥನ ಸನ್ನಿಧಿಯಲ್ಲಿ ಪ್ರಸನ್ನತೆ ಇರಲಿಲ್ಲ. ತಿರುಪ್ಪಾಣಿಯ ನಿರ್ಮಲ ಭಕ್ತಿಯೂ, ಶಾಂತ ಸ್ವಭಾವವೂ, ಸಂಗೀತ ಮಾಧುರ್ಯವೂ ಜನರ ಮನಸ್ಸನ್ನು ಸೆಳೆದಿತ್ತು. ಆದರೂ ಜಾತಿಯ ಕಟ್ಟು! ಅಂತ್ಯಜನಾದ ಆತನೊಡನೆ ಸಹವಾಸ ಬೆಳೆಸುವುದು ಹೇಗೆ? ಅಂತಹ ಭಕ್ತನಿಗೂ ಕೂಡ ಎಡೆಕೊಡದ ಆಚಾರವು ನಿಜವಾಗಿಯೂ ಸದಾಚಾರವೇ? ಇಷ್ಟು ಭಗವತ್ಪ್ರೇಮ ಪೂರಿತವಾದ ತಿರುಪ್ಪಾಣಿಯ ಕಣ್ಣುಗಳು ರಂಗನಾಥನ ದರ್ಶನ ಮಾಡಲು ಯೋಗ್ಯತೆಯುಳ್ಳವುಗಳಲ್ಲವೇ? ನಿರ್ಮಲ ಹೃದಯನೂ ಜಿತೇಂದ್ರಿಯನೂ ಆದ ಆತನ ಸ್ಪರ್ಶವು ಪಾಪವೇ?—ಇವೇ ಮೊದಲಾದ ಪ್ರಶ್ನೆಗಳು ಲೋಕಸಾರಂಗರ ಮನದಲ್ಲಿ ಏಳುತ್ತಿ ದ್ದಿರಬಹುದು. ಇದೇ ಯೋಚನೆಯಲ್ಲಿಯೇ ಮಗ್ನರಾಗಿ ಮುನಿ ಗಳು ಮಲಗಿದರು. ಇವರ ಸಮಸ್ಯೆಗಳನ್ನು ಬಗೆಹರಿಸಲೋ ಸುಗವೋ ಎಂಬಂತೆ ಆ ದಿನ ರಾತ್ರಿ ಅವರಿಗೆ ಒಂದು ಕನಸಾಯಿತು. ರಂಗನಾಥನು ಪ್ರತ್ಯಕ್ಷನಾಗಿ "ನನ್ನ ಅಂತರಂಗ ಭಕ್ತನಾದ ತಿರುಪ್ಪಾಣಿಯನ್ನು ಇಂಥ ಕ್ರೂರವರ್ತನೆಗೆ ಈಡುಮಾಡುವುದು ನಿನಗೆ ತಕ್ಕುದೇ? ಅವನ ಹಣೆಗೆ ತಾಕಿ ಗಾಯಮಾಡಿದ ಕಲ್ಲು ನನ್ನ ಹಣೆಗೆ ತಗುಲಿತೆಂಬುದನ್ನು ನೀನು ಬಲ್ಲೆಯಾ? ತಿರುಪ್ಪಾಣಿ

ಯನ್ನು ಅಂತ್ಯಜನೆಂದೂ ನಿಕೃಷ್ಟನೆಂದೂ ಭಾವಿಸಬೇಡ. ಅವನು ನನಗೆ ಅತ್ಯಂತ ಪ್ರಿಯನು, ನನ್ನ ಸ್ನೇಹಿತ, ನನ್ನ ದಾಸ. ನೀನು ಆತನೆಡೆಗೆ ಹೋಗಿ ಭಕ್ತಿಯಿಂದ ಆತನನ್ನು ನಿನ್ನ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಉತ್ಸವದೊಡನೆ ನನ್ನ ಸನ್ನಿಧಿಗೆ ಕರೆತರ ಬೇಕು. ಇದನ್ನು ಬಹಿರಂಗವಾಗಿ ಪ್ರಪಂಚಕ್ಕೆಲ್ಲಾ ತಿಳಿಯುವಂತೆ ಮಾಡಬೇಕು. ಇದು ನನ್ನ ಆಜ್ಞೆ. ನೀನದರಂತೆ ನಡೆ. ಇದೊಂದೇ ನೀನು ಮಾಡಿರುವ ಮಹಾಭಾಗವತಾಪಚಾರಕ್ಕೆ ಪ್ರಾಯಶ್ಚಿತ್ತ'' ಎಂದು ಹೇಳಿದಂತಾಯಿತು.

ಬೆಳಗಾಯಿತು. ''ಈಗೀಗ ನನ್ನ ಜನ್ಮವು ಸಫಲವಾಯಿತು. ಈ ದಿನ ನಿಜವಾಗಿಯೂ ಸುಪ್ರಭಾತದ ದಿನ'' ಎಂದುಕೊಂಡು ಅವರಿದ್ದೆಡೆಗೆ ಲೋಕಸಾರಂಗರು ಓಡಿದರು. ತಿರುಪ್ಪಾಣಿಯು ಕೈಯಲ್ಲಿ ತಂಬೂರಿ ಹಿಡಿದು ಅರ್ಧ ನಿಮೀಲಿತಲೋಚನರಾಗಿ ಸೂರ್ಯನಲ್ಲಿ ಅಂತರ್ಯಾಮಿಯಾಗಿರುವ ಸೂರ್ಯನಾರಾಯಣ ನನ್ನು ಕುರಿತು ಹಾಡುತ್ತಾ ನಿಂತಿದ್ದರು. ಲೋಕಸಾರಂಗರು ಮೆಲ್ಲನೆ ಅವರ ಸಮೀಪಕ್ಕೆ ಬಂದು ಅವರ ಪಾದಗಳಿಗೆರಗಿ ತಾವು ಮಾಡಿದ ಅಪಚಾರಕ್ಕಾಗಿ ಕ್ಷಮಾಪಣೆಯನ್ನು ಬೇಡಲು, ತಿರು ಪ್ಪಾಣಿ ಆಳ್ವಾರರು ಬೆಚ್ಚಿ ಬಿದ್ದು ''ಅಯ್ಯೋ! ಇದೇನು ದಿಟವೋ ಕನಸೋ'' ಎಂದು ಕೂಗಿ ''ನಾನು ಕುಲಹೀನ, ಪಂಚಮ. ನನ್ನನ್ನು ದಯವಿಟ್ಟು ಮುಟ್ಟಬೇಡಿ'' ಎನ್ನುತ್ತಾ ಹಿಂದುಹಿಂದಕ್ಕೆ ಸರಿದರು. ಲೋಕಸಾರಂಗರು ''ತಿರುಪ್ಪಾಣಿಯನ್ನು ರಂಗ ನಾಥನ ಸನ್ನಿಧಿಗೆ ಒಯ್ಯಬೇಕೆಂದು ತನಗೆ ಆಜ್ಞೆಯಾಗಿದೆ'' ಎನ್ನಲು ಅವರು ''ರಂಗನಾಥನ ಪವಿತ್ರ ಕ್ಷೇತ್ರದಲ್ಲಿ ಕಾಲಿಡಲು ತಾವು ಯೋಗ್ಯರಲ್ಲ'' ಎಂದು ದೂರದೂರ ಸರಿದರು. ಲೋಕ ಸಾರಂಗರು, ''ನೀವು ರಂಗನಾಥನ ಸನ್ನಿಧಿಯಲ್ಲಿ ಕಾಲಿಡಬೇ ಕಾಗಿಲ್ಲ. ನಾನು ಹೀಗೆ ಆಗದಂತೆ ನಿಮ್ಮನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಕರೆದೊಯ್ಯುವೆನು. ಇದು ರಂಗನಾಥನ ಆಜ್ಞೆ, ಕಟ್ಟಪ್ಪಣೆ, ನಾವಿಬ್ಬರೂ ಇದಕ್ಕೆ ಕಟ್ಟುಬೀಳಬೇಕು'' ಎಂದರು. ಇದನ್ನು ಕೇಳಿ ತಿರುಪ್ಪಾಣಿಯು, ''ಆತನ ಸಂಕಲ್ಪವಿದ್ದಂತಾಗಲಿ.

ಸಸ್ಯದಿಂದ ತೆನೆ ಹೊರಡುವಂತೆ ಮಾಡುವ ಈಶನಿಗೆ ಯಾರು ಅಡ್ಡಿ ಬರಬಲ್ಲರು ! ಅವನು ನಡೆಸುವುದೆಲ್ಲವೂ ನಮ್ಮ ಒಳ್ಳೆಯದಕ್ಕಾಗಿ. ನಾವಿರುವುದು ಆತನ ಭೋಗಕ್ಕಾಗಿ, ಕೈಂಕರ್ಯಕ್ಕಾಗಿ. ಅವನಿಚ್ಛೆಬಂದಂತಾಗಲಿ. ನೀವು ಏನು ಬೇಕಾದರೂ ಮಾಡಿಕೊಳ್ಳಿರಿ. ನಾನು ತಮಗೆ ಶರಣು '' ಎಂದು ಸುಮ್ಮನಾದರು.

ಲೋಕಸಾರಂಗರು ತಿರುಪ್ಪಾಣಿಯನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು, ವಿಜಯೋತ್ಸವದಿಂದ ಹಿಂದಿರುಗಿದ ಸೇನಾನಾಯಕನಂತೆ ಶ್ರೀರಂಗದ ಗುಡಿಗೆ ಕರೆತಂದರು. ಗುಡಿಯ ಆವರಣಗಳನ್ನು ದಾಟಿ ಜನರ ಕೋಲಾಹಲದ ಮಧ್ಯೆ ಹೊರಟು ರಂಗಮಂಟಪದಲ್ಲಿ ತಿರುಪ್ಪಾಣಿಯಾಳ್ವಾರರನ್ನು ನೆಲಕ್ಕಿಳಿಸಿದರು. ತಾವೆಂದೂ ಚರ್ಮಚಕ್ಷುಸ್ಸಿನಿಂದ ಕಾಣದ ರಂಗನಾಥನನ್ನು ಅವರು ದರ್ಶನಮಾಡಿ ಸಂತೋಷದಿಂದ ಹಿಗ್ಗಿ ಆನಂದಬಾಷ್ಪಗಳನ್ನು ಸುರಿಸುತ್ತಾ ವರ್ಷಾಂತರಗಳು ರಂಗನಾಥನ ದರ್ಶನಕ್ಕಾಗಿ ಹಂಬಲಿಸುತ್ತಿದ್ದ ತಮ್ಮ ತನುಮನಗಳನ್ನು ಭಗವಂತನ ಪಾದಗಳಲ್ಲಿ ಅರ್ಪಿಸಿಬಿಟ್ಟರು. ನಿತ್ಯದರಿದ್ರನು ನಿಧಿಯನ್ನು ಕಂಡಂತಾಯಿತು. ಅರ್ಚಾಮೂರ್ತಿಯಾದ ರಂಗನಾಥನ ದಿವ್ಯಮಂಗಳ ವಿಗ್ರಹವನ್ನು ಪಾದಾದಿ ಕೇಶಾಂತವಾಗಿ ಅನುಭವಿಸಿ ಆ ಅನುಭವಜನಿತ ಪ್ರೀತ್ಯತಿಶಯದಿಂದ ಹೊರಹೊಮ್ಮಿದ 'ಅಮಲನಾದಿಪಿರಾನ್' ಎಂಬ ದಿವ್ಯ ಪ್ರಬಂಧವನ್ನು ಹಾಡಿದರು. 'ಅರಂಗತ್ತಮ್ಮಾನ್ ತಿರುಕ್ಕಮಲಪಾದಂ ವನ್ದೆನ್‌ಕಣ್ಣಿನುಳ್ಳನವೊಕ್ಕಿನ್ರವೇ' 'ರಂಗಧಾಮನ ತಿರುಕಮಲ ಪಾದಗಳು ಬಂದೆನ್ನ ಕಣ್ಣಿನೊಳು ಹೊಕ್ಕವೇ' ಎಂದು ಹಾಡತೊಡಗಿದರು. ಈ ರೀತಿ ಈ ಹರಿಜನೋತ್ತಮರಿಗೆ ದೇವಾಲಯಪ್ರವೇಶವಾಯಿತು. ಅಂದು ನಡೆದ ಘಟನೆ ಇಂದು ನಡೆಯಬಾರದೇಕೆ ಎಂದು ಅನೇಕರು ಈ ದಿನ ಕೇಳತೊಡಗುವುದು ಸಹಜವಾಗಿಯೇ ಇದೆ.

ತಿರುಪ್ಪಾಣಿಯ ಕತೆಯನ್ನು ಅದೇ ಹೆಸರಿನ ಗೀತಪ್ರಧಾನವಾದ ರೂಪಕದಲ್ಲಿ ರಚಿಸಿ ಕನ್ನಡನಾಡಿಗೆ ಮಹೋಪಕಾರ

ಮಾಡಿರುವ 'ಶ್ರೀನಿವಾಸ' ರು ಆ ಗ್ರಂಥದಲ್ಲಿ 'ಅಮಲ ನಾದಿ ಪಿರಾನ್' ಪದ್ಯದ ಕನ್ನಡ ಅನುವಾದವನ್ನು ಕೊಟ್ಟಿರುವರು. ಅದರ ಮೊದಲ ಪದ್ಯವಿದು :

ಅಮಲನಾದಿ ಪಿರಿಯ ತನ್ನ ಜನಕೆ ನನ್ನನಾಳಗೆಯ್ದ
ವಿಮಲನಡಿಯ ದೇವರೊಡೆಯ ನನ್ನ ರಂಗಧಾಮನಡಿಯ
ಕಮಲ ಎನ್ನ ಕಣ್ಣು ಹೊಕ್ಕು ಇಂದು ಎದೆಯ ತಣಿಸುತಿಹವು ;
ಅಮಮ ನನ್ನ ಕುರಿತು ಇವನ ಕರುಣೆಯಿಂತು ಕಂಡೆನೇ.

ಕುಲವಿಲ್ಲದವನಿಗೆ ಕುಲವನ್ನಿತ್ತ ಭಗವಂತನ ಕೃಪಾತಿಶಯ ವನ್ನೂ ಕೊಂಡಾಡುವರು :

"ಭಾರವಾದ ಹಳೆಯ ಪಾಪದ ಅಂಚನ್ನು ಬಿಡಿಸಿ ನನ್ನನ್ನು ತನ್ನ ಕುಳವಾಡಿ ನಿಲ್ಲಿಸಿದನು ; ನಿಲ್ಲಿಸಿದ್ದಲ್ಲದೆ ನನ್ನ ಒಳಗನ್ನೂ ಹೊಕ್ಕನು."

ಭಗವಂತನು ತನ್ನ ನಿಜವಾದ ಭಕ್ತರಿಗೆ ಅದೆಷ್ಟು ಸುಲಭನು ಎನ್ನುವುದು ಆಳ್ವಾರರ ಜೀವನದ ಅನುಭವವಾಗಿದ್ದಿತು. ಈಶ ಸಾಕ್ಷಾತ್ಕಾರದ ಸವಿಯನುಂಡ ತಿರುಪ್ಪಾಣಿಯು "ಇವನನ್ನು ಕಂಡ ಕಣ್ಗಳು ಮತ್ತೊಂದನ್ನೂ ಕಾಣವು" ಎಂಬ ನಿರ್ಣಯಕ್ಕೆ ಬರುವರು. ಇಂತಹ ದಿವ್ಯ ಜೀವನ ತಿರುಪ್ಪಾಣಿಯವರದು.

## ೯. ತಿರುಮಂಗೈ ಆಳ್ವಾರ್

ಆಳ್ವಾರರಲ್ಲಿ ಕಳ್ಳರ್ ಎಂಬ ಕುಲಕ್ಕೆ ಸೇರಿದ ಆಳ್ವಾರರು ತಿರುಮಂಗೈ. ಇವರು ಬೆಟ್ಟ ಗುಡ್ಡ ಸೀಮೆಯಲ್ಲಿ ವಾಸಮಾಡುತ್ತಿದ್ದ ಬೇಡರ ಗುಂಪಿನವರು. ಇವರ ತಂದೆ ಚೋಳರಾಜನ ಸೈನ್ಯದಲ್ಲಿ ಸೇರಿ ತನ್ನ ಪರಾಕ್ರಮವನ್ನು ತೋರಿಸಿ ಕ್ರಮೇಣ ಚೋಳ ಸೇನಾಧಿಪತಿಯಾಗಿದ್ದನು. ತಂದೆಯಂತೆ ತಾನೂ ಸೈನ್ಯ ದಲ್ಲಿ ಸೇರಿ ಕಾಲಕ್ರಮದಲ್ಲಿ ಅವನಂತೆಯೇ ಸೈನ್ಯಾಧಿಪತಿ ಯಾದನು. ಚೋಳರಾಜನ ವಿಜಯಯಾತ್ರೆಗಳಲ್ಲಿ ಧೈರ್ಯ ದಿಂದ ಕಾದಾಡಿ ಸನ್ಮಾನ ಪಡೆದಿದ್ದನು. ಇವನ ಸಾಮರ್ಥ್ಯ

ವನ್ನು ಮೆಚ್ಚಿದ್ದ ಚೋಳರಾಜನು ಇವನನ್ನು ಚೋಳರಾಜ್ಯದ ತಿರುವಾಳಿ ನಾಡೆಂಬ ಪ್ರದೇಶಕ್ಕೆ ಪಾಳೆಯಗಾರನನ್ನಾಗಿ ನೇಮಿಸಿದನು.

ಇವನಿಗೆ ಇನ್ನೂ ಮದುವೆಯಾಗಿರಲಿಲ್ಲ. ಯಾರಿಗೂ ಹೆದರದವನಾಗಿ ಆರೋಗ್ಯ ಯೌವನ ಐಶ್ವರ್ಯಗಳಿಂದ ಮೆರೆಯುತ್ತಿದ್ದನು. ಇವನನ್ನು ಎದುರಿಸಲು ಯಾರಿಗೂ ಶಕ್ಯವಿರಲಿಲ್ಲ. ಇದಲ್ಲದೆ ಒಳ್ಳೆಯ ರಸಿಕನಾಗಿದ್ದನು. ಯುದ್ಧದಲ್ಲಿ ಹೇಗೆ ಚದುರನೋ ಅಂತೆಯೇ ಸಂಗೀತ, ನೃತ್ಯ ನಾಟಕ, ಪದ್ಯರಚನೆಗಳಲ್ಲಿ ಕುಶಲ. ವೈರಾಗ್ಯದ ಸೋಂಕೇ ಇವನಿಗೆ ತಾಕಿರಲಿಲ್ಲ. ಇಂದ್ರಿಯ ಸುಖಕ್ಕಿಂತಲೂ ಬೇರೊಂದು ಸುಖಕ್ಕೆ ಇವನು ಆಸೆಪಡುತ್ತಿರಲಿಲ್ಲ. ಇಂದ್ರಿಯ ಸುಖವಿಲ್ಲದ ಜೀವನವು ಹುರುಳಿಲ್ಲದ ಜೀವನವೆಂದು ಭಾವಿಸಿದ್ದನು. ಹೀಗೆ ಕೆಲವು ದಿನಗಳು ಕಳೆದವು. ತಿರುವಾಳಿ ನಾಡಿನಲ್ಲಿ ತಿರುವೆಳ್ಳಕ್ಕುಳಮ್ ಎಂಬ ತಾವರೆಯ ಕೊಳ. ಒಂದು ದಿನ, ಕೆಲವರು ಅಪ್ಸರಕನ್ನಿಕೆಯರು ವಿಹಾರಾರ್ಥವಾಗಿ ಆ ಕೊಳದೆಡೆಗೆ ಬಂದರಂತೆ. ಕೊಳದ ತಾವರೆಗಳಿಗೆ ಮನಸೋತು ತಿರುಮಾಮಗಳ್ ಎಂಬ ಅಪ್ಸರ ಕನ್ನಿಕೆಯು ಕೊಳದ ಸೋಪಾನದಮೇಲೆ ನೀರಿನ ಅಂಚಿನಲ್ಲಿ ನಿಂತು ಅರಳಿದ ತಾವರೆ ಹೂಗಳನ್ನು ಕೀಳುತ್ತಿದ್ದಳು. ಅವಳು ಎಷ್ಟು ಹೊತ್ತಿಗೂ ಹಿಂದಿರುಗಿ ಬಾರದಿದ್ದುದನ್ನು ನೋಡಿ, ಇವಳನ್ನಲ್ಲಿಯೇ ಬಿಟ್ಟು ಮಿಕ್ಕವರು ಹೊರಟುಹೋದರು. ಅವಳು ದಿಕ್ಕು ತೋರದೆ ಅಲ್ಲಿಯೇ ನಿಂತಳು. ಆ ಸಮಯದಲ್ಲಿ ಔಷಧಿಯ ಮೂಲಿಕೆಗಳನ್ನು ಹುಡುಕಿಕೊಂಡು ವೈಷ್ಣವ ವೈದ್ಯನೊಬ್ಬನು ಅಲ್ಲಿಗೆ ಬಂದನು. ಸ್ನಾನ ಮಾಡುವುದಕ್ಕೆಂದು ಕೊಳದಲ್ಲಿಳಿದನು. ಒಂಟಿಗಳಾಗಿ ನಿಂತಿದ್ದ ಯುವತಿಯನ್ನು ನೋಡಿ, “ ನೀನು ಯಾರಮ್ಮಾ, ಇಲ್ಲಿ ಒಂಟಿಯಾಗಿರಲು ಕಾರಣವೇನು ” ಎಂದು ಕೇಳಿದನು. “ ನಾನು ನನ್ನ ಗೆಳತಿಯರೊಡನೆ ವಿಹಾರಕ್ಕಾಗಿ ಇಲ್ಲಿಗೆ ಬಂದೆ. ಹೂಗಳನ್ನು ಕೊಯ್ಯುತ್ತಿದ್ದ ನನ್ನನ್ನು ಬಿಟ್ಟು ಅವರೆಲ್ಲರೂ ಹೊರಟುಹೋದರು.

ನನಗಾರೂ ದಿಕ್ಕಿಲ್ಲ. ನಿನ್ನೊಡನೆ ನನ್ನನ್ನು ಮನೆಗೆ ಕರೆದು ಕೊಂಡು ಹೋಗು '' ಎಂದವನನ್ನು ಬೇಡಿದಳು. ಮಕ್ಕಳಿಲ್ಲದ ಈ ವೈಷ್ಣವ ಭಕ್ತನಿಗೆ ಅತ್ಯಾನಂದವಾಯಿತು. ಅವಳನ್ನು ಮನೆಗೆ ಕರೆದುಕೊಂಡು ಹೋಗಿ ಮಕ್ಕಳಿಗಾಗಿ ಹಂಬಲಿಸುತ್ತಿದ್ದ ಹೆಂಡತಿಯ ವಶಕ್ಕೆ ಒಪ್ಪಿಸಿದನು. ತಾವರೆ ಕೊಳದ ಸಮೀಪದಲ್ಲಿ ದೊರಕಿದ್ದರಿಂದ ಇವಳಿಗೆ ಕುಮುದವಲ್ಲಿ ಎಂದು ನಾಮಕರಣ ಮಾಡಿದನು. ದಿನದಿನಕ್ಕೂ ಸೌಂದರ್ಯ ಲಾವಣ್ಯಗಳು ಹೊಮ್ಮುತ್ತಿದ್ದ ಇವಳಿಗೆ ಸರಿಯಾದ ವರನನ್ನು ಹುಡುಕಿ ಮದುವೆಮಾಡಬೇಕೆಂದು ಯೋಚಿಸಿದನು.

ಹೆಂಗಳ ಬೇಟೆಯಲ್ಲಿ ನಿರತನಾಗಿದ್ದ ತಿರುಮಂಗೈಗೆ ಇವಳ ರೂಪ ಲಾವಣ್ಯಗಳ ಸುದ್ದಿ ಮುಟ್ಟಿತು. ಯಾವುದೋ ಒಂದು ನೆಪ ಮಾಡಿಕೊಂಡು ಕುಶಲ ವಿಚಾರಿಸಬೇಕೆಂದು ಆ ವೈಷ್ಣವ ವೈದ್ಯನ ಮನೆಗೆ ಬಂದನು. ಅತನೊಡನೆ ಮಾತನಾಡುತ್ತಾ ಇರು ವಾಗ ಕುಮುದವಲ್ಲಿಯು ಏತಕ್ಕಾಗಿಯೋ ಅವನು ಕುಳಿತಿದ್ದ ಹಜಾರಕ್ಕೆ ಬಂದು ಮಿಂಚಿನಂತೆ ಹೊಳೆದು ಹೊರಟುಬಿಟ್ಟಳು. ಇಂತಹ ಸೌಂದರ್ಯದ ಕನಸನ್ನು ಇವನೆಂದಿಗೂ ಕಂಡಿರಲಿಲ್ಲ. '' ಸ್ವಾಮಿ, ನಿಮಗೆ ಮಕ್ಕಳಿಲ್ಲವೆಂದು ಕೇಳಿದ್ದೇನೆ. ಹೀಗಿರು ವಲ್ಲ, ಈ ಲಾವಣ್ಯದ ನಿಧಿ ಇಲ್ಲೆಲ್ಲಿ ಬಂತು ? '' ಎಂಬುದಾಗಿ ವೈದ್ಯ ನನ್ನು ಕೇಳಿದನು. ಅವನು ಹಿಂದೆ ನಡೆದ ವೃತ್ತಾಂತವನ್ನೆಲ್ಲಾ ಅರುಹಿ ಕೊನೆಯಲ್ಲಿ '' ನನಗೆ ಮಕ್ಕಳಿಲ್ಲದಿದ್ದರೂ ಈ ರತ್ನವು ನನಗೆ ಸಿಕ್ಕಿದಾಗಿನಿಂದ ನನಗೊಂದು ಹೊಸ ಚಿಂತೆ ಮನಸ್ಸಿನಲ್ಲಿ ಬೇಯುತ್ತಿದೆ. ಇವಳಿಗಾಗಿ ಅನುರೂಪನಾದ ವರನನ್ನು ಹುಡುಕ ಬೇಕೆಂದಿದ್ದೇನೆ '' ಎಂದು ಪ್ರತ್ಯುತ್ತರವಿತ್ತನು. ಇದಕ್ಕೆ '' ನೀವೇನೂ ಯೋಚನೆಮಾಡಬೇಡಿ. ನನಗೆ ಮದುವೆಯಿಲ್ಲ. ಈ ಯುವತಿಯನ್ನು ನನಗೆ ಕೊಡಲು ಇಷ್ಟವಿದೆಯೋ '' ಎಂದು ತಿರುಮಂಗೈ ಕೇಳಿದನು. '' ನನಗೇನೋ ಇಷ್ಟವೇ. ಆದರೆ ಅವಳನ್ನು ಕೇಳಬೇಕು '' ಎಂದುತ್ತರ ಬಂದಿತು. ಅವಳನ್ನು ಕೇಳಲಾಗಿ ಕುಮುದವಲ್ಲಿಯು ವಿಷ್ಣುಭಕ್ತನಲ್ಲದ ಯಾರಿಗೂ ನಾನು

ಒಲಿಯಲಾರೆ ಮತ್ತು ಇವನು ವೈಷ್ಣವನಾದರೆ ನನ್ನ ಅಡ್ಡಿ ಏನೂ ಇಲ್ಲ" ಎಂದಳು. ಆತನು ಹಾಗೆಯೇ ಆಗಲೆಂದು ಒಪ್ಪಿ ಪಂಚಸಂಸ್ಕಾರವನ್ನು ಹೊಂದಿ ವೈಷ್ಣವದೀಕ್ಷೆಯನ್ನು ಕೈಕೊಂಡು ಸಿದ್ಧನಾಗಿ ಬಂದನು. "ಈಗ ಮತ್ತೊಂದು ವ್ರತವನ್ನು ಕೈಕೊಳ್ಳ ಬೇಕು: ಏನೆಂದರೆ, ಪ್ರತಿದಿನವೂ ವಿಷ್ಣುಭಕ್ತರಿಗೆ ಆರೋಗಣೆ ಗೈದು ಅನಂತರ ಊಟಮಾಡಬೇಕು" ಎಂದು ಬೇರೆ ಒತ್ತಾಯ ಪಡಿಸಿದಳು. ಅದೂ ಆಗಬಹುದೆಂದು ಒಪ್ಪಿದಮೇಲೆ ಕುಮುದ ವಲ್ಲಿಗೂ ತಿರುಮಂಗೈಗೂ ಮದುವೆಯಾಯಿತು.

ಕುಮುದವಲ್ಲಿಗೆ ಮಾತುಕೊಟ್ಟಂತೆ ವಿಷ್ಣುಭಕ್ತರ ಕೈಂಕರ್ಯ ನಡೆದುಬಂತು. ಇದರ ವೆಚ್ಚಕ್ಕಾಗಿ ತನ್ನ ಪಾಳೆಯದ ಬೊಕ್ಕಸ ವನ್ನು ಬರಿದುಮಾಡಲು, ಚೋಳರಾಜನು ಇವನನ್ನು ಹಿಡಿದುತರ ಹೇಳಿ ತನ್ನ ಸೈನ್ಯವನ್ನು ಕಳುಹಿಸಿಕೊಟ್ಟನು. ಈ ಸಮಯದಲ್ಲಿ ದೈವಿಕವಾಗಿ ಗುಪ್ತಧನವೊಂದು ಸಿಕ್ಕಿ ಬಿಡುಗಡೆ ಹಣವನ್ನು ತಿರುಮಂಗೈ ತೆತ್ತು ಸ್ವತಂತ್ರನಾದನು. ಆದರೆ ಉದ್ಯೋಗ ಕಳೆದುಕೊಂಡನು. ಬಡತನ ಬಂತು. ಕುಮುದವಲ್ಲಿಗೆ ಮಾತು ಕೊಟ್ಟಂತೆ ನಡೆಯಿಸಬೇಕೆಂಬ ಆತುರದಿಂದ ತನ್ನ ಜಾತಿಯ ಕಸ ಬಾಗಿದ್ದ ದರೋಡೆಗೆ ಪುನಃ ಕೈಹಾಕಿದನು. ಮಾತು ತಪ್ಪುವುದ ಕ್ಕಿಂತ ಸಾಯುವುದು ಲೇಸೆಂದು ಭಾವಿಸಿದನು. ಈ ತನ್ನ ಪ್ರೇಯ ಸಿಗೆ ಸಂಬಂಧಿಸಿದ ನೀತಿಯನ್ನು ಉಳಿಸುವುದಕ್ಕಾಗಿ ಅನೀತಿಯ ದಾರಿ ಹಿಡಿದನು. ಇವನದೊಂದೇ ಗುರಿ ಜೀವನದಲ್ಲಿ; ಅದು ಕುಮುದವಲ್ಲಿಯ ಮುಖೋಲ್ಲಾಸ. ಇದಕ್ಕಾಗಿ ಪ್ರಯಾಣಿಕರ ಮೇಲೆ ಬಿದ್ದು ಅವರಲ್ಲಿದ್ದುದನ್ನೆಲ್ಲಾ ಅಪಹರಿಸುತ್ತ ಬಂದನು. ಈ ದಾರಿಹೋಕನ ಕಾಟ ತಡೆಯಲಸಾಧ್ಯವಾಯಿತು. ಮುಳ್ಳು ಪೊದರುಗಳ ಮಧ್ಯೆ ತಿರುಮಂಗೈಯ ಆತ್ಮದ ಮೊಗ್ಗು ನಿಧಾನವಾಗಿ ಅರಳುತ್ತಿದ್ದಿತು. ಕಡುಪಾಪಿಯ ಜೀವನವು ಪುಣ್ಯಜೀವನವಾಗಿ ಪರಿಣಾಮವಾಗಬೇಕಾಯಿತು. ಕಹಿಯಲ್ಲಿ ಸಿಹಿ ಹುಟ್ಟುವ ಪ್ರಸಂಗ ಬಂದೊದಗಿತು. ಭಗವಂತನ ನಿರ್ಹೇತುಕ ಕೃಪೆಯಿಂ ದಲೇ ಇದು ಸಾಧ್ಯವೆಂದು ಆಳ್ವಾರರೆಲ್ಲರೂ ನಂಬಿದ್ದರು. ಅವನ

ಕೃಪೆ ಇಲ್ಲವಾದರೆ ಮನುಷ್ಯನ ಜೀವನ ಕಸಕ್ಕಿಂತ ಕಡೆ ಎಂಬ ಭಾವನೆ ಇತ್ತು. ಅವನ ಕೃಪೆ ಇದ್ದರೆ ಕಲ್ಲಿನಲ್ಲಿ ಅಹಲ್ಯೆಯು ಉದ್ಭವಿಸಿದಂತೆ, ಕಸದಲ್ಲಿ ರತ್ನ ಸಿಕ್ಕಿದಂತೆ, ಪಾಪಿಜೀವನದಿಂದ ಪವಿತ್ರತೆಯ ಜೀವನವು ಹುಟ್ಟಬಹುದೆಂಬುದು ಭಾಗವತ ಮತದ ನಂಬಿಕೆ. ತಿರುಮಂಗೈಯಲ್ಲಿ ಈ ಪರಿಣಾಮವಾಗಲು ಕುಮುದ ವಲ್ಲಿಯು ನಿಮಿತ್ತವಾದಳು.

ಒಂದು ದಿನ ತಿರುಮಂಗೈ ಮರದಮೇಲೆ ಕುಳಿತು ದಾರಿ ಕಾಯುತ್ತಿದ್ದನು. ನಾರಾಯಣನೇ ಮದುವೆ ಗಂಡಾಗಿ ಲಕ್ಷ್ಮಿಯೇ ಮದುವಣಗಿತ್ತಿಯಾಗಿ ವೇಷ ಮರೆಸಿಕೊಂಡು ವೈತುಂಬ ಆಭರಣಗಳನ್ನು ತೊಟ್ಟು ಮದುವೆಯ ಮೆರವಣಿಗೆಯಲ್ಲಿ ಪರಿವಾರ ಸಮೇತ ಬರುತ್ತಿದ್ದರು. ತಿರುಮಂಗೈ ತನ್ನ ಪರಿವಾರದೊಡನೆ ಅವರ ಮೇಲೆ ಬಿದ್ದನು. ಮೆರವಣಿಗೆಯ ಪರಿವಾರದವರು ತಮ್ಮಲ್ಲಿದ್ದ ಸಾಮಾನುಗಳನ್ನು ಬಿಟ್ಟು ಪರಾರಿಯಾದರು. ಮದುವಣಗ ಮದುವಣಗಿತ್ತಿಯರು ತಿರುಮಂಗೈಯ ಕೈಗೆ ಸಿಕ್ಕಿ ಕೊಂಡರು. ಅವರಲ್ಲಿದ್ದ ಆಭರಣಗಳನ್ನೆಲ್ಲಾ ಕಸಿದುಕೊಂಡು ಮೂಟೆ ಕಟ್ಟಿಟ್ಟುಕೊಂಡು ಅದನ್ನು ಎತ್ತಲು ಹೋದಾಗ ಎತ್ತಲಾರ ದಷ್ಟು ಭಾರವಾಗಿ ಕಂಡುಬಂತು. ಹಾಗೆ ಹೀಗೆ ಅಲ್ಲಾಡಿಸು ವುದೂ ಕಷ್ಟವಾಯಿತು. ತಾನು ಮಾಡಿದ ಪ್ರಯತ್ನವು ನಿಷ್ಫಲ ವಾದದ್ದನ್ನು ಕಂಡು ಅವನು ಮದುವಣಗನಮೇಲೆ ಸಿಟ್ಟುಕೊಂಡು, " ಎಲೋ ಮಂತ್ರವಾದಿ! ನೀನೇನೋ ಮಂತ್ರ ಹಾಕಿರುವೆ " ಎಂದು ಆವೇಶದಿಂದ ಕೂಗಿದನು. " ಮಂತ್ರವನ್ನು ನಿನಗೂ ಉಪದೇಶ ಮಾಡುವೆನು. ಹತ್ತಿರ ಬಂದು ತಲೆಬಾಗಿ ನಿಂತು ಕಿವಿಗೊಟ್ಟರೆ ಮಂತ್ರ ಹೇಳಿಕೊಡುವೆನು " ಎಂದು ಉತ್ತರ ಬಂತು

ಇದನ್ನು ಕೇಳಿ, " ಹಾಗೋ! ನಿನಗೆ ತಲೆಬಾಗಬೇಕೋ; ಅದು ನನ್ನಿಂದಾಗದು. ಇಗೋ ನೋಡು, ಮಂತ್ರ ಹೇಳಿಕೊಡ ದಿದ್ದರೆ " ಎಂದು ದರೋಡೆಗಾರನು ಒರೆಯಿಂದ ಕತ್ತಿಯನ್ನು ಸೆಳೆದನು. " ಹಾಗಾದರೆ ಮಂತ್ರ ತೆಗೆದುಕೋ " ಎಂದು ಹೇಳಿ

ಅಷ್ಟಾಕ್ಷರೀ ಮಂತ್ರವನ್ನು ಉಪದೇಶಮಾಡಲು ಅದನ್ನು ಉಸುರಿ ದೊಡನೆಯೇ ಮೂಟೆಯನ್ನು ಎತ್ತಲಾಯಿತು. ಇದನ್ನು ನೋಡಿ ಆಶ್ಚರ್ಯದಿಂದ ಕೂಡಿದವನಾಗಿ ತಿರುಮಂಗೈ ತಲೆಯೆತ್ತಿ ನೋಡಲು ಮದುವಣಿಗ ಮದುವಣಿಗಿತ್ತಿಯರ ಬದಲು ಗರುಡಾರೂಢನಾದ ಲಕ್ಷ್ಮೀಸಹಿತನಾದ ನಾರಾಯಣನ ಕಣಸು ಕಂಡನು. ಕಾಂಚನ ಗಿರಿ ಶೃಂಗದಮೇಲೆ ತೇಲುವ ಕಾರ್ಮುಗಿಲಿನಂತೆ ಕಂಡಿತು ಆ ದೃಶ್ಯ. ಅವನ ಹೃದಯ ಪರಿತಾಪದಿಂದ ತಲ್ಲಣಿಸಿತು; ಕ್ಷಣಮಾತ್ರದಲ್ಲೇ ತನ್ನ ಹೃದಯವನ್ನು ಶೋಧನೆಮಾಡಿಕೊಂಡನು; ಪರಮಾತ್ಮನಲ್ಲಿ ಸರ್ವಾರ್ಪಣಮಾಡಿ ಆತನ ಕೈಂಕರ್ಯಕ್ಕೆ ತನ್ನ ಜೀವನವನ್ನು ಮುಡುಪಾಗಿಟ್ಟುಬಿಟ್ಟನು. ಪ್ರಪಂಚದ ಭೋಗೈ ಶ್ವರ್ಯಗಳು ಹುಲ್ಲಿಗಿಂತಲೂ ಕಡೆಯಾದವು. ಭಗವದನುರಾಗಕ್ಕೆ ಸರಿಗಟ್ಟುವ ಆನಂದ ಬೇರೊಂದಿಲ್ಲವೆಂದು ಮನಗಂಡನು. ನೀಲ ನೆಂದು ಹೆಸರುಳ್ಳವನಾಗಿದ್ದ ಈ ದರೋಡೆಗಾರನಿಗೆ ತಿರುಮಂಗೈ ಆಳ್ವಾರ್ ಎಂದು ಹೆಸರು ಬಂತು. ಪೆರಿಯ ತಿರುಮೊಳಿ, ತಿರು ಕ್ಕುರುನ್ದಾಂಡಗಮ್, ತಿರುನೆಡುಂದಾಂಡಗಮ್, ತಿರುವೆಳುಕ್ಕುಟ್ರಿ ರುಕ್ಕೈ, ಶಿರಿಯ ತಿರುಮಡಲ್, ಪೆರಿಯ ತಿರುಮಡಲ್ ಎಂಬುವು ಇವರ ಪ್ರಬಂಧಗಳು. ಅವರ ಪದ್ಯಗಳಲ್ಲಿ ಕೆಲವನ್ನು 'ಶ್ರೀನಿ ವಾಸ' ರು ಅನುವಾದ ಮಾಡಿರುವರು. ತಿರುಮಂಗೈ ತಮ್ಮ ಜೀವನದ ಚರಿತ್ರೆಯನ್ನೂ ತನ್ನ ಬಾಳು ದೇವರಲ್ಲಿನ ಭಕ್ತಿ ಯಿಂದ ಹಸನಾದ ರೀತಿಯನ್ನೂ ಈ ಪದ್ಯ ಒಂದರಲ್ಲಿ ಹೀಗೆ ವರ್ಣಿಸಿದ್ದಾರೆ :

ಬಾಡಿದೆನು; ಬಾಡಿ ಮನನೊಂದಿಗಿದೆನು, ಹಿರಿಯ ದೂಸರ ಈ
 ಬಾಳಿನಲ್ಲಿ ಹುಟ್ಟಿ
ಕೂಡಿದೆನು; ಹರೆಯದ ಹೆಣ್ಣುಗಳನ್ನು ಕೂಡಿ ಅವರು ಕೊಡುವ
 ಸಂಬಂಧವನ್ನೇ ಆಶಿಸಿ
ಓಡಿದೆನು; ಓಡಿ ಉಳಿಸುವ ಒಂದು ವಸ್ತುವಿನಿಂದ ಜ್ಞಾನವೆಂಬ
 ಹಿರಿಯ ಪದವಿಯನ್ನು ತಿಳಿದು
ನಾಡಿದೆನು; ನಾಡಿ ನಾನು ಕಂಡುಕೊಂಡೆನು ನಾರಾಯಣಾ
 ಎಂಬ ಹೆಸರನು .

ಇದು ಜೀವವೋ ಅಮೃತವೋ ಎಂದು ಎಣಿಸಿ ಕರಗಿ ಆಯಾ
ಹೆಣ್ಣಳ ಎದೆಯನ್ನೇ ಗತಿಯೆನ್ನುತ್ತ
ಪಾಪಿಯಾದ ನಾನು ತಿಳಿಯದೆ ಇರಲು ಎಷ್ಟು ದಿನ ಹಳದಾಗಿ
ಎಷ್ಟು ದಿನ ನಷ್ಟವಾಯಿತು!
ರಕ್ಕೆಗೂಡಿದ ಅಂಚೆ ಜೊತೆಯ ಹಕ್ಕಿಯೊಂದಿಗೆ ಹೋಗುವ ಸುತ್ತು
ಹೊಸಲಿನ ಕೊಡಂದೆಯನ್ನು ಸೇವಿಸಿ
ನನ್ನ ನಾಲಿಗೆಯಿಂದ ಬದುಕಿಕೊಳ್ಳುವುದಕ್ಕೆ ಕಂಡುಕೊಂಡೆನು
ನಾನು ನಾರಾಯಣಾ ಎಂಬ ಹೆಸರನ್ನು.

ಇವರ ಕವಿತೆಗಳು ಜನರ ಹೃದಯವನ್ನು ಹೊಕ್ಕವು. ಇವರಿಗೆ "ನಾಲ್ ಕವಿ ಪ್ಪೆರುಮಾಳ್" ಎಂಬ ಹೆಸರು ಸಂದಿತು. ಆಶು, ಮಧುರಮ್, ಚಿತ್ರಮ್, ವಿಸ್ತಾರಮ್ ಎಂಬ ನಾಲ್ಕು ವಿಧವಾದ ಪದ್ಯ ರಚನೆಯಲ್ಲಿ ಶ್ರೇಷ್ಠರೆನಿಸಿಕೊಂಡರು.

ತಮ್ಮ ಪರಿತಾಪದ ಬೇನೆಯನ್ನು ಹೊರಗೆಡಹುವ ನಿಟ್ಟುಸಿರೋ ಎಂಬಂತಿದೆ ಈ ಪದ್ಯ:

ಕಳ್ಳನು ನಾನು, ಕೆಡಕು ಮಾಡಿದೇನೆ, ಕಂದ ವಿಷಯಕ್ಕೆ ಅಲೆ
ದಿದೇನೆ: ನಿಜ.
ಆದರೂ ತಿಳಿದವನಾದೆನು. ಉದ್ಧಾರವಾಗುವ ಮಾರ್ಗವನ್ನು
ಸೇರಿದೆನು. ಬೇಗನೆ ದೇವರ ಅನುಗ್ರಹವನ್ನು ಪಡೆದೆನು.
ಒಳಗೆಲ್ಲ ಕರಗಿ ಕೊರಲು ಸಡಿಲವಾಗಿ ದನಿಗೆಟ್ಟು ಮೈಯೆಲ್ಲ
ಕಣ್ಣೀರು ಸೇರಿರಲು
ಕಗ್ಗತ್ತಲ ರಾತ್ರಿಯಲ್ಲಿ ಹಗಲಲ್ಲಿ ನಾನು ಕರೆಯುತ್ತಿರುವೆನು
ನಾರಾಯಣಾ ಎಂಬ ಹೆಸರನ್ನು.

"ಕಲೆಗಳನ್ನು ಕಲಿತವನಲ್ಲ ನಾನು: ಐದು ಪೊಲನು ಎಳಸುವ ಆಸೆಗಳಿಗೆ ಮನವನ್ನು ತಿರುಗಿಸಿದೆನು" ಎಂದು ಹೇಳಿಕೊಂಡ ತಿರುಮಂಗೈ "ಒಳ್ಳೆಯ ಗತಿಗೆ ಬಾಳಿಸುವ ದಾರಿಯನ್ನು" ಹಿಡಿದರು. "ಕುಲವನ್ನು ತರುವ ಸಿರಿಯನ್ನು ತಂದಿಡುವ" ಈ ಭಾಗ್ಯ, ಇವರವರೆನ್ನದೆ, ಈ ಕುಲ ಆ ಕುಲವೆನ್ನದೆ ಎಲ್ಲರನ್ನೂ ಬಾಳಿಸಬಲ್ಲದೆಂದು ಉಪದೇಶ ಮಾಡಿದರು. ಪೆರಿಯ ತಿರು

ಮಳಿಯ ಕೆಲವು ಪದ್ಯಗಳಲ್ಲಿ ಭಗವಂತನು ಪರಮ ಕಾರುಣಿಕನೆಂಬುದನ್ನೂ ಪತಿತ ಪಾವನನೆಂಬುದನ್ನೂ ಈ ರೀತಿ ವರ್ಣಿಸಿರುವರು. ಅವುಗಳ ಭಾವಾನುವಾದವಿದು ;

ಬೆಸ್ತರ ಒಡೆಯನಾದ ಗುಹನನ್ನು ಕೀಳು ಕುಲದವನೆಂದು ನೀನು ಅಸಡ್ಡೆ ಮಾಡಲಿಲ್ಲ. ನಿನ್ನ ಕೃಪೆಯಲ್ಲಿ ಅವನನ್ನು ಮುಳುಗಿಸಿದೆ. 'ಹರಿಣಾಕ್ಷಿಯಾದ ಸೀತೆ ನಿನ್ನ ಗೆಳತಿ ; ನನ್ನ ತಮ್ಮ ನಿನ್ನ ತಮ್ಮ' ನೆಂದು ಗುಹನಿಗೆ ಹೇಳಿದ ನಿನ್ನ ಪ್ರೀತಿ ಎಷ್ಟುಮಟ್ಟಿನದು ! ಗುಹನನ್ನು ಪಾಲಿಸಿದಂತ ನನ್ನನ್ನು ಪಾಲಿಸು, ರಂಗಾ !

ಕಪಿಜಾತಿಗೆ ಸೇರಿದ ಹನುಮಂತನನ್ನು ನೀನು ಕಪಿ ಎಂದು ಅಲ್ಲಗಳೆಯಲಿಲ್ಲ. ಆತನನ್ನು ನಿನ್ನ ಪ್ರಾಣಸಖನೆಂದು ತಬ್ಬಿಕೊಂಡೆ. ನಿನ್ನ ಪ್ರೇಮವನ್ನು ಅವನಿಗಿತ್ತೆ. ಅಂತಹ ಕರುಣೆ ನಿನ್ನದು. ಅಂತಾ ದೇವನ ಅಡಿಗಳಲ್ಲಿ ದಾಸನು ನಾನು.

ತಾವರೆಯ ಕೊಳದಲ್ಲಿ ಮೊಸಳೆಯ ಬಾಯಿಗೆ ಸಿಕ್ಕಿದ ಗಜೇಂದ್ರನನ್ನು ಪಶುವೆಂದು ನೀನು ನಿರಾಕರಿಸಲಿಲ್ಲ. ತನ್ನ ನೋವಿನಲ್ಲಿ ನಿನ್ನನ್ನು ನೆನೆದಾಗ ಸಡಗರದಿಂದ ಓಡಿಬಂದ ಲೋಕದ ಒಡೆಯ ನೀನು. ನಿನ್ನಡಿಗಳಲ್ಲಿ ನನ್ನ ಶರಣು.

ದೇವಾ ! ನದಿಯ ದಡದಲ್ಲಿ ಬೆಳದುನಿಂತ ಮರದಂತೆ ಬಾಳಿನ ಸುಳಿಯಲ್ಲಿ ಸಿಕ್ಕಿ ಬುಡಸಹಿತ ಅಳಿಯುವೆನೇನೋ ಎಂದು ಅಂಜುತಿಹೆನು. ಎರಡುಕಡೆ ಉರಿವ ಕೊಳ್ಳಿಯ ಮಧ್ಯೆ ಸಿಕ್ಕಿದ ಇರುವೆಯಂತೆ ಅಂಜುತಿಹೆನು. ಮತ್ತೊಮ್ಮೆ ಸಂಸಾರದಲಿ ಬೀಳುವೆನೆಂದು ಕರಗುತಿರುವ ನನ ಹೃದಯವನ್ನು ನಿನ್ನಲ್ಲಿಗೆ ತಂದಿರುವೆನು ; ಪ್ರಭುವೇ ! ಕಹಿಯಾದರೂ ಬೇವಿನೆಲೆಯನ್ನೇ ತಿಂದು ಬದುಕುವುದು ಆ ಮರದ ಹುಳುವು ; ಹೀಗಿರಲು ನಿನ್ನ ಕೆನ್ನಡಿಗಳ ಸಿಹಿಯನ್ನು ಸವಿದ ನಾನು ಅವುಗಳೇ ನನ್ನ ಬದುಕೆಂದು ಬಗೆದು ಅವುಗಳನ್ನು ಪ್ರೀತಿಸುತಿಹುದೇನಾಶ್ಚರ್ಯ !

ಕೋಲೂರಿ ಮುಂದೆ ನಡೆಯುವಂತ ಮುಪ್ಪು ನಮ್ಮ ಮೇಲೆ ಸುಳಿಯುವ ಮುನ್ನ, ಕಾಲೂರಿ ನಿಂತಾಗ ತೂರಾಡುವ ಗತಿ ನಮಗೆ ಬರುವ ಮುನ್ನ, ಹೆತ್ತ ತಾಯಿಯಂತೆ ನಟಿಸಿ ಬಂದ ರಕ್ಕಸಿಯ ಉಸಿರನ್ನು ಹೀರಿದ ನಮ್ಮ ಸ್ವಾಮಿಗೆ ತಲೆಬಾಗುವ.

# ೧೦. ಮಧುರಕವಿಯಾಳ್ವಾರ್ ಮತ್ತು ನಮ್ಮಾಳ್ವಾರ್

ಮಧುರಕವಿಯಾಳ್ವಾರರ ಮತ್ತು ನಮ್ಮಾಳ್ವಾರರ ಜೀವನಗಳು ಒಂದರಲ್ಲೊಂದು ಬೆರೆದ ಜೀವನಗಳು. ನಮ್ಮಾಳ್ವಾರರೆಂಬ ಮರವನ್ನು ಆಶ್ರಯಿಸಿದ್ದ ಬಳ್ಳಿ ಮಧುರಕವಿಯಾಳ್ವಾರರು. ಬ್ರಾಹ್ಮಣರಾದ ಮಧುರಕವಿಗಳು ವೆಳ್ಳಾಳಜಾತಿಯ ನಮ್ಮಾಳ್ವಾರರನ್ನು ತಮ್ಮ ಪರಮಾಚಾರ್ಯರನ್ನಾಗಿ ಅಂಗೀಕರಿಸಿ "ಆಚಾರ್ಯದೇವೋ ಭವ" ಎಂಬುದನ್ನು ಅಕ್ಷರಶಃ ತಮ್ಮ ಆಚಾರ್ಯ ನಿಷ್ಠೆಯಲ್ಲಿ ತೋರಿದರು. ಕುಲಕ್ಕಿಂತಲೂ ಗುಣಕ್ಕೆ ಕೊಟ್ಟ ಹಿರಿಮೆ ಏನೆಂಬುದು ಇವರ ಜೀವನದಿಂದ ವ್ಯಕ್ತವಾಗುವುದು.

ತಾಮ್ರಪರ್ಣೀ ನದೀತೀರದಲ್ಲಿ ಕುರುಗೂರೆಂಬ ಊರಿನಲ್ಲಿ ನಮ್ಮಾಳ್ವಾರರು ಹುಟ್ಟಿದರು. ಇವರಿಗೆ ಶಠಗೋಪ ಎಂದೂ ಹೆಸರು. ನಮ್ಮಾಳ್ವಾರರು ಹುಟ್ಟಿದಾರಭ್ಯ ಹದಿನಾರು ವರ್ಷಗಳ ಪರ್ಯಂತವೂ ಹುಣಿಸೆಮರದ ಪೊಟರೆ ಒಂದರಲ್ಲಿ ಕಣ್ಣುಬಾಯಿ ತೆರೆಯದೆ ಯೋಗನಿದ್ರೆಯಲ್ಲಿದ್ದರೆಂದು ಐತಿಹ್ಯ. ಹೀಗಿರಲು ಬದರಿಕಾಶ್ರಮದಿಂದ ಅಯೋಧ್ಯೆಗೆ ಮಧುರಕವಿಗಳು ಯಾತ್ರೆ ಮುಗಿಸಿಕೊಂಡು ಬರುತ್ತಿರಲು ಒಂದು ರಾತ್ರಿ ತೆಂಕಣ ದಿಕ್ಕಿನಲ್ಲಿ ಪ್ರಕಾಶವಾದ ತೇಜಸ್ಸೊಂದನ್ನು ಕಂಡರು. ಪ್ರತಿ ರಾತ್ರಿಯೂ ಅದು ಒಂದೇ ರೀತಿ ಜ್ವಲಿಸುತ್ತಿದ್ದುದನ್ನು ನೋಡಿ ಅದರ ರಹಸ್ಯವನ್ನು ತಿಳಿಯಲು ಆ ತೇಜಸ್ಸನ್ನೇ ಗುರಿಯಾಗಿಟ್ಟುಕೊಂಡು ದಕ್ಷಿಣಮುಖವಾಗಿ ಪ್ರಯಾಣಮಾಡಿ ಬಂದರು. ದಿನದಿನವೂ ಈ ರೀತಿ ಪ್ರಯಾಣ ಮಾಡುತ್ತಾ ಕುರುಗೂರನ್ನು* ಸೇರಿದರು. ಆ ಊರಿಗೆ ಬಂದಮೇಲೆ ಬೆಳಕು ಮಾಯವಾಯಿತು. ಹುಣಿಸೆ

---

* ಈಗ ಅದು ಆಳ್ವಾರ್ ತಿರುನಗರಿ ಎಂದು ಪ್ರಸಿದ್ಧವಾಗಿದೆ.

ಮರದ ಪೊಟರೆಯಲ್ಲಿ ಧ್ಯಾನದಲ್ಲಿದ್ದ ಮಗುವಿನ ಕೌತುಕವನ್ನು ತಿಳಿದರು. ಅಲ್ಲಿಗೆ ಹೋಗಿ ನೋಡಲಾಗಿ ಅವರು ನೋಡಿದ ತೇಜಸ್ಸೂ ನಮ್ಮಾಳ್ವಾರರ ಹೊನ್ನೊಡಲಿನ ಪ್ರಕಾಶವೂ ಒಂದೇ ಆಗಿ ತೋರಿತು. ನಮ್ಮಾಳ್ವಾರರು ಪದ್ಮಾಸನಾರೂಢರಾಗಿ ಧ್ಯಾನಾಸಕ್ತರಾಗಿ ಕುಳಿತಿದ್ದರು. ಕಣ್ಣುಗಳು ಮುಚ್ಚಿದ್ದವು; ಬಲದ ಕೈಯಲ್ಲಿ ಜ್ಞಾನಮುದ್ರೆ; ಹದಿನಾರು ವರ್ಷದ ಪ್ರಾಯ. ಇದೇನು ಶಿಲಾಪ್ರತಿಮೆಯೋ ಎಂಬ ಭ್ರಾಂತಿ ಹುಟ್ಟಿತು. ಪರೀಕ್ಷೆ ಮಾಡೋಣವೆಂದು ಒಂದು ದಪ್ಪ ಕಲ್ಲನ್ನು ಎತ್ತಿ ತಪ್ಪನೆ ಕೆಳಗೆ ಹಾಕಿದರು. ಈ ಸಪ್ಪಳವನ್ನು ಕೇಳಿದೊಡನೆಯೇ ನಮ್ಮಾಳ್ವಾರರು ಕಣ್ಣು ತೆರೆದು ತಮ್ಮ ಕೃಪಾಪೂರ್ಣ ದೃಷ್ಟಿಯನ್ನು ಮಧುರ ಕವಿಗಳ ಮೇಲೆ ಬೀರಿದರು. ಆದರೆ ಮಾತೇನೂ ಹೊರಡಲಿಲ್ಲ. ಇನ್ನೂ ಪರೀಕ್ಷೆಮಾಡೋಣವೆಂದು ಮಧುರಕವಿಗಳು, "ಪ್ರಕೃತಿಯ ಉದರದಲ್ಲಿ ಉದಯಿಸಿದ ಜೀವನು ಯಾವುದನ್ನು ತಿಂದು ಹೇಗಿರುವನು?" ಎಂದು ಪ್ರಶ್ನೆಮಾಡಿದರು. ಅದಕ್ಕೆ ಉತ್ತರವಾಗಿ, "ಅದನ್ನೇ ತಿಂದು ಅಲ್ಲೇ ಇರುವನು" ಎಂದರು. ಇದನ್ನು ಕೇಳಿ ಮಧುರಕವಿಗಳು ಪರಮಾನಂದ ಭರಿತರಾಗಿ ಯೋಗಿಯ ಪಾದಗಳಿಗೆರಗಿ ತಮ್ಮ ಹೃದಯದಲ್ಲಿ ಉಕ್ಕಿಬಂದ ನಮ್ಮಾಳ್ವಾರರಲ್ಲಿನ ಗಾಢಭಕ್ತಿಯನ್ನು ಹೊರ ಸೂಸುವ ಪದ್ಯಗಳನ್ನು ಹಾಡಿದರು :

ಕೋಗಿಲೆಗಳು ನಿಂತು ಹಾಡುವ ಸುತ್ತು ತೋಟದ ಕುರುಗೂರ ಭಕ್ತನೇ
ನಿನ್ನ ದಿವ್ಯಪಾದದ ಭಕ್ತಿಯನ್ನು ಬೇಡುತ್ತೇನೆ.
ನಾಲಗೆಯಿಂದ ನುಡಿದ ಇಂಪನ್ನು ಸಾರಿದೆನು ;
ಅವನ ಹೊನ್ನಡಿಯ ಮೈತ್ರಿಯನ್ನು ಆಶ್ರಯಿಸಿದೆನು ;
ದೇವರು ಬೇರೆಯನ್ನರಿಯೆನು ; ಕುರುಗೂರ ಭಕ್ತನ
ಹಾಡನ್ನು ಇನಿದಾಗಿ ರಾಗದಿಂದ ಹಾಡಿ ಅಲೆಯುತ್ತಿದ್ದೇನೆ.

ನನ್ನನ್ನು ಕಂಡುಕೊಂಡು ಕಾರಿಮಾರ ಶಿರಿಯನು
ಅನಾದಿಯಾದ ಬಲಿಷ್ಠ ಪಾತಕವನ್ನು ರೂಪುಗೆಡಿಸಿ ನನ್ನನ್ನು ಸಲಹಿದನು.

ಒಳ್ಳೆಯ ತಮಿಳಿನ ಶಠಕೋಪನ ಕರುಣೆಯನ್ನು
ಎಂಟು ದಿಕ್ಕು ಅರಿಯುವಂತೆ ಸಾರುತ್ತೇನೆ.

ನಮ್ಮಾಳ್ವಾರರಿಗೆ ಅವರ ತಪಸ್ಸಿನ ಫಲವಾಗಿ ಈಶಸಾಕ್ಷಾತ್ಕಾರದ ಅನುಭವವಾಯಿತು. ತಮ್ಮ ಅನುಭವವನ್ನು ತಿರುವಿರುತ್ತಮ್, ತಿರುವಾಶಿರಿಯಮ್, ಪೆರಿಯ ತಿರುವಂದಾದಿ, ತಿರುವಾಯ್‌ಮೊಳಿ ಎಂಬ ನಾಲ್ಕು ಕೃತಿಗಳಲ್ಲಿ ಹಾಡಿರುವರು. ತಿರುವಾಯ್‌ಮೊಳಿಯಲ್ಲಿಯೂ ತಿರುವಿರುತ್ತಮ್ ಎಂಬ ಕೃತಿಯಲ್ಲಿಯೂ ನಲ್ಲನಲ್ಲೆಯರು ಅನುಭವಿಸುವ ಸಂಶ್ಲೇಷ ವಿಶ್ಲೇಷ ಭಾವಗಳಿಂದಲೂ ಶೃಂಗಾರ ಶಾಂತ ರಸಮಿಳಿತವಾದ ಮಧುರರಸದಿಂದಲೂ ತಮ್ಮಲ್ಲಿ ಉಕ್ಕಿ ಬರುತ್ತಿರುವ ಭಗವತ್ಪ್ರೇಮವನ್ನು ವಿಧವಿಧವಾಗಿ ನಲಿದು ಪಾಡಿರುವರು: ತಮ್ಮಲ್ಲಿ ನಾಯಿಕೆಯ ಭಾವವನ್ನು ಆರೋಪಿಸಿಕೊಂಡು ಜಗನ್ನಿಯಾಮಕನಾದ ನಾಯಕನಲ್ಲಿ ಮನಸೋತು ಆತನ ಸಾನ್ನಿಧ್ಯದಲ್ಲಿ ಆನಂದವನ್ನೂ ಆತನ ವಿಶ್ಲೇಷದಲ್ಲಿ ಹೃದಯವಿದಾರಕವಾದ ವಿರಹವೇದನೆಯನ್ನೂ ಅನುಭವಿಸಿ ಆ ಮೂಲಕ ತಮಗೂ ಭಗವಂತನಿಗೂ ಇದ್ದ ಅಂತರಂಗ ಪ್ರೇಮವನ್ನು ವ್ಯಕ್ತಗೊಳಿಸಿರುವರು. ಇದರ ವಿಷಯವಾಗಿ ಬರೆಯುತ್ತ "ಶ್ರೀನಿವಾಸ" ರು ಈ ರೀತಿ ಹೇಳುತ್ತಾರೆ :—

"ಇಷ್ಟಲ್ಲದೆ ಪ್ರಕೃತಿಯ ಸೌಂದರ್ಯವನ್ನು ಹೇಳುವುದರಲ್ಲಿ ಈ ಕವಿಯು ಜೀವಕ್ಕೆ ತಂಪಾಗುವ ವಿಷಯವನ್ನೂ ಉದ್ಧರಿಸಿ ಹೇಳುತ್ತಾನೆ. ಆನೆಗಳು ಜೊತೆಯಾಗಿ ಹೋಗುವುದು, ತಾಯಿಜಿಂಕೆ ಮರಿಯೊಂದಿಗೆ ನಡೆಯುವುದು ; ನವಿಲು ಗಂಡು ಹೆಣ್ಣು ಜೊತೆಯಾಗಿ ನಲಿಯುವುದು ; ಈ ಚಿತ್ರಗಳನ್ನು ನಾವು ಇಲ್ಲಿ ಕಾಣುತ್ತೇವೆ. ಒಳ್ಳೆಯದರ ಉಪದೇಶ, ಕ್ಷೇತ್ರವನ್ನು ಕುರಿತ ಹೊಗಳಿಕೆ, ಪ್ರಕೃತಿ ಸೌಂದರ್ಯದ ವರ್ಣನೆ, ಇಷ್ಟ ದೈವದ ಆರಾಧನೆ ; ಇವು ಸರಿಸಮನಾಗಿ ಬೆರೆತು ಕೃತಿಕಾರನ ಮುಕ್ತ ಚೇತನದ ಸ್ವರೂಪವನ್ನು ತೋರಿಸುವ ಈ ಕೃತಿಗೆ ಸಮನಾದ ಕೃತಿ ಧಾರ್ಮಿಕ ಸಾಹಿತ್ಯದಲ್ಲಾಗಲಿ ಧಾರ್ಮಿಕವಲ್ಲದ ಸಾಹಿತ್ಯ

ದಲ್ಲಾಗಲಿ ದೊರೆಯುವುದು ದುರ್ಲಭ.'' (ವಿವರ್ಶ ೪.—ಪು. ೧೦೩, ೧೦೪.)

ಭಗವಂತನನ್ನು ಪ್ರಿಯನೆಂದು ಭಾವಿಸಿ ಪ್ರೇಯಸಿಯ ಭಾವವನ್ನು ಒಳಕೊಂಡ ಭಕ್ತಿ ಒಂದು ರೀತಿಯದು. ಈ ರೀತಿಯ ಮಧುರ ಭಕ್ತಿಭಾವ ನಮ್ಮಾಳ್ವಾರರ ಕೃತಿಗಳಲ್ಲಿ ಸ್ಪಷ್ಟ ರೂಪವನ್ನು ತಾಳಿದೆ. ಈ ಕೃತಿಗಳಲ್ಲಿ ಮುಖ್ಯವಾದವು ತಿರುವಾಯ್‌ಮೊಳಿ ಮತ್ತು ತಿರುವಿರುತ್ತಮ್ ಎಂಬುವು. ತನ್ನ ಕವಿತೆಯನ್ನು ನರಸ್ತುತಿಗೆ ಎಂದೆಂದೂ ಉಪಯೋಗಿಸುವುದಿಲ್ಲವೆಂದೂ ಪರಮಾತ್ಮನ ಸ್ತುತಿಗಾಗಿಯೇ ಅದು ಮುಡುಪಾಗಿದೆಯೆಂದೂ ತಿರುವಾಯ್‌ಮೊಳಿಯ ಪದ್ಯ ಒಂದರಲ್ಲಿ ಹೇಳಿರುವರು : '' ಎನ್ನಾವಿಲ್ ಇನ್‌ಕವಿಯಾ ನಿನ್ನೊರುವರ್‌ಕ್ಕುಮ್ ಕೊಡುಕ್ಕಿಲೇನ್ '' —ನನ್ನ ನಾಲಗೆಯ ಇನಿದಾದ ಕವಿತೆಯನ್ನು ಇನ್ನಾರಿಗೂ ಕೊಡಲೊಲ್ಲೆ !

ತಿರುವಾಯ್‌ಮೊಳಿಯಲ್ಲಿ ೧೧೦೨ ಪದ್ಯಗಳಿವೆ. ತಿರುವಿರುತ್ತಮ್ ಎಂಬುದು ೧೦೦ ಪದ್ಯಗಳನ್ನೊಳಕೊಂಡಿದೆ. ತಿರುವಿರುತ್ತಮ್ ಎಂಬುದು ತಿರುವಾಯ್‌ಮೊಳಿಯ ವಿಷಯವನ್ನೇ ಸಂಗ್ರಹವಾಗಿ ಹೇಳುವುದಲ್ಲದೆ, ಪ್ರೇಯಸಿಯ ಭಾವವನ್ನು ತಾಳಿದ ನಮ್ಮಾಳ್ವಾರರು ತನ್ನ ಪ್ರಿಯನಾದ ಭಗವಂತನಿಗೆ ವಿಶ್ಲೇಷದಶೆಯಲ್ಲಿ ತನ್ನ ಸ್ಥಿತಿಯನ್ನು ಕುರಿತು ಕಳುಹಿಸುವ ಸಂದೇಶವನ್ನು ಮನೋಹರವಾದ ರೀತಿಯಲ್ಲಿ ವಿವರಿಸಿದೆ. ಜಾತಿಯಲ್ಲಿ ಎಷ್ಟು ನಿಕೃಷ್ಟರಾದರೂ ಎಷ್ಟು ಜ್ಞಾನಹೀನರಾದರೂ ಭಗವಂತನ ಭಕ್ತರಾಗಿದ್ದರೆ ಅಂಥವರ ದಾಸರ ದಾಸನಾಗಲು ತಾನು ಸಿದ್ಧನೆಂಬ ಭಾವವನ್ನು ಒಂದು ಪದ್ಯದಲ್ಲಿ ವಿವರಿಸಿರುವರು.

ಕುಲಗಳ ಸಿರಿ ಎನಿಸಿದ ಜಾತಿಗಳು ನಾಲ್ಕಕ್ಕೂ ಕೆಳಗಿಳಿದವರು,
ಅರಿವಿಲ್ಲದವರು, ಚಂಡಾಲರಿಗಿಂತಲೂ ಚಂಡಾಲರಾದರೂ
ಚಕ್ರವನು ಹಿಡಿದವನ, ಮಣಿವಣ್ಣನ, ಸ್ವಾಮಿಯ ಆಳೆಂದು

ಮಾನದೊಳರಿತರ ಅಂತಪ್ಪ ಅಡಿಯಾಳುಗಳ **ಅಡಿಯಾಳುಗಳು** ನಮ್ಮೊಡಯರು. ಅಂಥವರ ಅಡಿಗಳು ನಮಗೆ ಶರಣು.

ಇನ್ನೊಂದು ಪದ್ಯದಲ್ಲಿ—

ಏಳು ಲೋಕಗಳನುಂಡ ನನ್ನೊಡೆಯ ಎನ್ನಾತ್ಮನಲ್ಲಿ ನೀನು ಬೆರೆದಿರುವೆ. ಈ ನಿನ್ನ ಪ್ರೀತಿಗೆ ಪ್ರತಿಯಾಗಿ ನನ್ನನ್ನೇ ನಿನಗಾಗಿ ಕೊಟ್ಟೆ. ನಿನಗಿತ್ತ ನಾನೆಂಬುದು ಹಿಂದಿರುಗಿ ಬರುವುದೆತ್ತ ? ನನ್ನಾತ್ಮನಿಗೆ ಆತ್ಮನೂ ನೀನೇ ಅಲ್ಲವೆ ? ಹೀಗಿರಲು ನನ್ನ ನಾನಾವುದೆಡ, ನಾನೆಂಬುದಾರು ? ನೀನೇ ತಂದ ನಾನು, ಇದನ್ನೇ ನೀನು ಕೊಂಡೆ.

ತನ್ನ ಜೀವವು ಭಗವಂತನಿಗಾಗಿ ಪರಿತಪಿಸುವ ಬಗೆಯನ್ನು ಕುರಿತು ಈ ಪದ್ಯಗಳಲ್ಲಿ ಈ ರೀತಿ ಹೇಳಿರುವರು :

ನನ್ನೊಡೆಯ ! ನೀನೊಂದು ದಿವ್ಯ ಜ್ಯೋತಿ. ಅದರ ಬಿಸಿಯಿಂದ ನನ್ನ ಹೃದಯ ಕರಗುತಿದೆ; ನನ್ನಾತ್ಮ ಬೇಯುತಿದೆ. ನನ್ನಾತ್ಮ ಉರುಗಿ ನಿನ್ನಲ್ಲಿ ಬೆರೆಯುವುದೆಂದಿಗೆ ಎಂಬ ಹಂಬಲು ನನ್ನದು.

ನೀಲವಾದ ಬೆಟ್ಟಗಳೂ, ಅವುಗಳಲ್ಲ ತಣ್ಣಗೆ ಆಳವಾಗಿರುವ ತಾವರೆ ಕೊಳಗಳೂ ನನ್ನ ಸ್ವಾಮಿಯ ಕಣ್ಣಿನ ಸೊಬಗು. ಮೇಘವರ್ಣನಾದ ನನ್ನ ಸ್ವಾಮಿಯು ಗರ್ಜಿಸುವ ಸಮುದ್ರಗಳಿಂದ ಆವರಿಸಲ್ಪಟ್ಟ ಈ ಭೂಮಿಯ ಒಡೆಯ, ಹಾಗೆಯೇ ಸಗ್ಗದ ಒಡೆಯ, ಅಂತೆಯೇ ಜ್ಞಾನಿಗಳ ಭಕ್ತರ ಒಡೆಯ—ಮಾತ್ರ ನನ್ನಿನಿಯ.

ಕೋಗಿಲೆಗಳಿರಾ ! ಇಂಚರದ ಕೂಗು ನಿಮ್ಮದು. ಕೆಂದಾವರೆಯಂತಹ ಕಣ್ಣಿನ ಸೊಬಗಿನ ನನ್ನ ಸ್ವಾಮಿಯ ಕಡೆಗೆ ನನ್ನ ದೂತಿಯರಾಗಿ ಹೋಗಬಾರದೇಕೆ ? ಅದರಿಂದ ನಿಮಗೇನು ಕೆಡುಕುಂಟಾದೀತು ?

ಅವನ ಕನಡಿಗಳಲ್ಲಿ ಸೇವೆ ಮಾಡುವ ಒಳ್ಳೆಯ ದಿನ ಇನ್ನೆಷ್ಟು ದೂರವಿದೆಯೋ ಕಾಣೆನಲ್ಲಾ ಹೇ ವಿಧಿಯೇ ! ಅಳಿವಿಂದು

---

* ಅಕ್ಕಮಹಾದೇವಿ (ಪ್ರಚಾರ ಪುಸ್ತಕಮಾಲೆ, ೩೨) : 'ಚಿಲಮಿಲಿ ಎಂದೋದುವ ಗಿಳಿಗಳಿರಾ . . . ' ಈ ವಚನವನ್ನು ಹೋಲಿಸಿ (ಪುಟ ೫೧).

ಗಳಿರಾ! ಚಕ್ರಪಾಣಿಯಾದ ನನ್ನ ಸ್ವಾಮಿಯನ್ನು ಕಂಡು "ನಿನ್ನನಗಲದ ದುಃಖದಿಂದ ಸೊರಗುತ್ತಿರುವ ಆ ನಾಯಿಕೆಯು ದುಃಖದ ಬೇಗೆಯಲ್ಲಿ ಅಳಿಯುವುದರ ಮುನ್ನ ಕೃಪಾಸಾಗರನೆಂದು ಹೆಸರಿತ್ತಿದ ನೀನು ಒಂದು ದಿನವಾದರೂ ಅಕೆಗೆ ನಿನ್ನ ದರ್ಶನವನ್ನೀಯಬಾರದೇ" ಎಂದು ನಿಮ್ಮ ಇಂಪಾದ ಧ್ವನಿಯಲ್ಲಿ ಹೇಳಿ ಕೃಪೆಮಾಡಿ. ನೀವು ಹೇಗೆಂದರೂ ಅವನು ಉದಾಸೀನನಾದರೆ ನಾನೇನು ತಪ್ಪು ಮಾಡಿದೆನೋ ನನಗರಿವಿಲ್ಲ.

ಎಳಗಿಳಿಯೇ! ನಾನು ಸಾಕಿದವಳಲ್ಲವೇ ನೀನು? ತಂಬೆಲರು ತಂಪನೆಸಗುವ ಬದಲು ತಾಪವನೆಸಗುತಿಹುದು ಅವನನಗಲದ ನನಗೆ. ನನಗಾಗಿ ಅವನೆಡೆಗೆ ಹೋಗಿ ಇದನರುಹು. "ಅವಳ ತಪ್ಪುಗಳನ್ನೇ ನನೆಯುತಿರುವೆಯಾ? ಕರುಣೆ ಎಂಬುದು ನಿನ್ನ ಗುಣವಲ್ಲವೋ? ಕರುಣೆಯಿರುವುದಾದರೆ ಈ ಬಡವಳ ಮೇಲೆ ಅದನ್ನು ತೋರಿಸಬಾರದೇಕೆ? ನಿನ್ನ ದಯೆಗೆ ಅವಳು ಪಾತ್ರಳಾಗದಿರಲು ಅವಳು ಮಾಡಿದ ತಪ್ಪು ತಾನೇ ಏನು" ಎಂದು.

ಸ್ವಾಮಿಯೋ! ನಾನು ಕಡುಪಾಪಿ, ನಿಜ. ಆದರೆ ಈಗ "ದಾಮೋದರಾ, ದಾಮೋದರಾ" ಎಂದು ಹೇಳಿ ಹೇಳಿ ಕೂಗಿ ಕೂಗಿ ಎದೆ ಉರುಗಿ ಕಂಬನಿ ಸುರಿಯುತಿದೆ. ಪಾಪಿಯಾದ ನನ್ನ ಮುಂದೆ ಬಂದು ನಿಂತು "ನೀನು ಪಾಪಿ" ಎಂದಾದರೂ ಹೇಳಿಹೋಗು. ಹಾಗಾದರೂ ನಿನ್ನನ್ನು ಕಾಣುವಂತಾಗಲಿ.

ನನ್ನ ಹೃದಯದಲ್ಲಿ ನೀನಿರುವೆ ಎಂದು ಬಲ್ಲೆ. ನನ್ನ ಹೊರಗೂ ನೀನಿರುವೆ ಎಂದು ಬಲ್ಲೆ. ಇದನರಿತೂ ನನಗೆ ತೃಪ್ತಿಯಿಲ್ಲ. ನಿನ್ನನ್ನು ನನ್ನೆರಡು ಕಂಗಳಿಂದ ಕಾಣಬೇಕೆಂಬ ಚಪಲ ನನಗೆ. ಇದು ನನ್ನ ಹೃದಯದ ಆಸೆ. ಇದು ತೀರುವ ಬಗೆ ಹೇಗೆ?

ಯಾರಿಗೇನೂ ಇಡಲಾರದವನು ಕೊಡಲಾರದವನು ನಾನು; ಇಂದ್ರಿಯಗಳನ್ನು ಬಿಗಿ ಹಿಡಿಯಲಾರೆ; ನಿಯಮದಿಂದ ಹೂಗಳನ್ನು ತಂದು ನಿಯಮವರಿತ ಪೂಜೆಗೈಯಲು ಆಗದವನು; ಇದಲ್ಲದೆ ಕಡುಪಾಪಿ ನಾನು. ಆದರೆ ನಿನ್ನನ್ನು ಕಾಣಬೇಕೆಂದು ಹಠ ತೊಟ್ಟಿರುವೆನು. ನಿನ್ನನ್ನು ಕಾಣಲು ಮನಸಾರೆ ಬಯಸುತಿಹೆನು. ನನ್ನ ಹೃದಯದಿಂದ ನಿನ್ನನ್ನು ಹುಡುಕುತಿರುವೆನು. ನಾನೆಂದು ಕಾಣುವೆನು ನಿನ್ನ, ನನ್ನೊಡೆಯ?

## ೧೧. ಆಳ್ವಾರರ ಸಂದೇಶ

ಮೇಲೆ ಉಲ್ಲೇಖಿಸಿರುವ ಹನ್ನೆರಡುಮಂದಿ ಆಳ್ವಾರರ ಜೀವನದ ಕತೆಗಳಿಂದಲೂ ಅವರಿಂದ ರಚಿತವಾದ ಕೃತಿಗಳಿಂದಲೂ ಅವರ ಉಪದೇಶವೇನೆಂಬುದು ಈ ರೀತಿ ಸ್ಪಷ್ಟವಾಗುವುದು: ಆಳ್ವಾರರ ಪಂಥ ಭಕ್ತಿಪಂಥ. ಬುದ್ಧಿಗಿಂತಲೂ ಭಾವಕ್ಕೆ ಹೆಚ್ಚು ಬೆಲೆ. ಜ್ಞಾನಮಾರ್ಗಕ್ಕಿಂತಲೂ ಭಕ್ತಿಮಾರ್ಗವು ಸುಗಮ. ಭಗವಂತನಲ್ಲಿ ಆತ್ಮ ಸಮರ್ಪಣೆ ಮಾಡುವುದೇ ಪರಮ ಪುರುಷಾರ್ಥ. ಭಗವಂತನೊಬ್ಬನೇ ಉಪಾಸ್ಯನು. ಈತನಲ್ಲಿ ಅವ್ಯಭಿಚರಿತ ಭಕ್ತಿ ಇಡಬೇಕು. ದೇವತಾಂತರ ಪರಿತ್ಯಾಗವು ಏಕದೇವೋಪಾಸನೆಗೆ ಮುಖ್ಯವಾದದ್ದು. ನಾರಾಯಣನೇ ಜಗದಾದಿ ಕಾರಣನು. ಅವನು ಜಗತ್ತಿನಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ಸಂಸಾರ ಚಕ್ರವನ್ನು ತಿರುಗಿಸುತ್ತಿರುವನು. ಜಗತ್ತು ಇವನ ಶರೀರ. ಈ ಶರೀರದಲ್ಲಿ ಆತ್ಮನು ಇವನೇ. ಚೇತನಾಚೇತನ ವಸ್ತುಗಳೆಲ್ಲವೂ ಅವನ ಪ್ರಕಾರಗಳು ಮತ್ತು ಅವನಿಗೆ ಶೇಷಭೂತವಾದವುಗಳು. ಇವನು ಸರ್ವವ್ಯಾಪಿಯೂ, ಅಕ್ಷರನೂ, ಅಮೃತನೂ ಆಗಿರುವನು. ಸತ್ಯ ಸೌಂದರ್ಯಗಳ ನೆಲೆ ಇವನು, ಸಚ್ಚಿದಾನಂದ ಸ್ವರೂಪನು, ಕಲ್ಯಾಣ ಗುಣ ಪರಿಪೂರ್ಣನು, ಕೃಪಾಪೂರಿತನು. ಕೃಪೆಯೇ ಜಗನ್ಮಾತೆಯಾದ ಶ್ರೀಮನ್ನಾರಾಯಣನ ವಕ್ಷಃಸ್ಥಲ ನಿವಾಸಿಯಾದ ಲಕ್ಷ್ಮೀದೇವಿ. ತನ್ನ ಸೌಶೀಲ್ಯ, ಸೌಲಭ್ಯ, ವಾತ್ಸಲ್ಯ ಗುಣಗಳ ಸಲುವಾಗಿ ತನ್ನ ಭಕ್ತರಿಗಾಗಿ ರಾಮಕೃಷ್ಣಾದ್ಯವತಾರಗಳನ್ನು ಎತ್ತಿದ್ದಲ್ಲದೆ ಅರ್ಚಾರೂಪಿಯಾಗಿ ಕಲ್ಲು, ಮರ, ಕಂಚು, ಮತ್ತಿತರ ಲೋಹ ಪ್ರತಿಮೆಗಳಲ್ಲಿ ತನ್ನ ಭಕ್ತರಿಗೆ ದರ್ಶನ ಕೊಡುತ್ತಾ ಅವರಿಂದ ಅರ್ಚಿಸಲ್ಪಡುತ್ತಿರುವನು. ಪರಮಾತ್ಮನು ತನ್ನ ಭಕ್ತರಿಗೆ ತಂದೆಯಾಗಿಯೂ, ತಾಯಿಯಾಗಿಯೂ, ಸ್ನೇಹಿತನಾಗಿಯೂ, ಒಡೆಯನಾಗಿಯೂ, ಕಾಂತನಾಗಿಯೂ, ಗುರುವಾಗಿಯೂ ಆಯಾ ಸನ್ನಿವೇಶಗಳಿಗೆ ತಕ್ಕಂತೆ ಕಾಣಿಸಿಕೊಳ್ಳುವನು. ಜೀವನು ಪರ

ಮಾತ್ಮನ ಸೊತ್ತು. ಎಲ್ಲರ ಹೃದಯದಲ್ಲಿ ಅಂತರ್ಯಾಮಿಯಾ ಗಿರುವ ಭಗವಂತನು ಚಿತ್ತಶುದ್ಧಿಯಿಂದ ನಮ್ಮೊಳಗೇ ಕಾಣಿಸಿ ಕೊಳ್ಳುವನು. ಪರಮಾತ್ಮನ ಪಾದಸೇವೆಗಿಂತಲೂ ಬೇರೆ ಪ್ರಯೋ ಜನವಿಲ್ಲ. ಕೈಂಕರ್ಯದಿಂದಲೇ ಜೀವನ ಸಾರ್ಥಕವಾದೀತು. ಭಗವತ್ಕೈಂಕರ್ಯವೂ ಭಾಗವತ ಕೈಂಕರ್ಯವೂ ಒಂದೇ ಅಂತಸ್ತಿನವು. ಜೀವಾತ್ಮ ಪರಮಾತ್ಮರಿಗೆ ಇರುವ ನಿಕಟ ಸಂಬಂಧವು ಪ್ರೇಮ ಸಂಬಂಧ. ಭಗವಂತನ ಸ್ವರೂಪವೇ ಪ್ರೇಮವಾದ್ದರಿಂದ ಪ್ರೇಮದಿಂದಲೇ ಆತನೊಡನೆ ಸಾಯುಜ್ಯ ಪಡೆಯಲು ಸಾಧ್ಯ. ವಿಷಯ ಭೋಗಗಳಲ್ಲಿ ಆಶೆಯನ್ನು ತೊರೆದು ಆ ಆಶೆಯನ್ನು ಪರಮಾತ್ಮನಲ್ಲಿ ಬೆಳಸಬೇಕು ; ದೇಹವೇ ಆತ್ಮ ವೆಂಬ ಭ್ರಾಂತಿಯನ್ನು ಬಿಡಬೇಕು ; 'ನಾನು' 'ನನ್ನದು' ಎಂಬ ಮಮತೆಯನ್ನು ಮತ್ತು ಅಹಂಕಾರವನ್ನು ತೊರೆಯಬೇಕು ; ನಮ್ಮ ಕರ್ಮಗಳನ್ನೆಲ್ಲಾ ಫಲಾಪೇಕ್ಷೆ ಇಲ್ಲದೆ ಆತನ ಸೇವೆ ಎಂದೇ ಭಾವಿಸಿ ಮಾಡಬೇಕು. ಸಂಪೂರ್ಣ ಶರಣಾಗತಿಯೇ ನಮ್ಮ ಸ್ವರೂಪಕ್ಕೆ ತಕ್ಕ ಅನುಷ್ಠಾನ. ಭಗವಂತನ ಸೇವೆ ಅಥವಾ ಕೈಂಕರ್ಯಕ್ಕೆ ಬೇರೆ ಪ್ರಯೋಜನವಿಲ್ಲ. ಇದೇ ಅದರ ಪ್ರಯೋ ಜನ. ಪರಮಾತ್ಮನಿಗೆ ರೂಪವಿಲ್ಲದಿದ್ದರೂ, ಆಕಾರವಿಲ್ಲದಿದ್ದರೂ ಅವನು ಭಕ್ತರಿಗಾಗಿ ರೂಪ ಆಕಾರಗಳನ್ನು ತಾಳುವನು.

ಭಕ್ತಿಗಿಂತಲೂ ಪ್ರಪತ್ತಿ ಎಂಬುದು ಸುಲಭ. ಇದು ಚರ ಮೋಪಾಯ. ಇದಕ್ಕೆ ವರ್ಣಾಶ್ರಮಾಧಿಕಾರಗಳು ಬೇಕಿಲ್ಲ. ಎಲ್ಲರೂ ಅಧಿಕಾರಿಗಳೇ. ಪಂಡಿತ ಪಾಮರರಿಗೆ ಸಮನಾದ ಮಾರ್ಗವಿದು. ಎಷ್ಟು ಪತಿತನಾದರೂ ಪ್ರಪತ್ತಿ ಮಾರ್ಗನಿಷ್ಠ ನಾದರೆ ಮುಕ್ತಿಯನ್ನು ಪಡೆಯಬಲ್ಲನು ; ಕಾಲ ದೇಶ ಅವಸ್ಥಾ ಭೇದಗಳು ಇದಕ್ಕಿಲ್ಲ. "ನೀನೇ ಶರಣು, ನೀನಲ್ಲದೆ ನನಗೆ ಮತ್ತೆ ಯಾರೂ ಗತಿ ಇಲ್ಲ" ಎಂಬ ಮನೋಧರ್ಮವೇ ಪ್ರಪತ್ತಿ ಮನೋಧರ್ಮ, ಇದೇ ಆತ್ಮ ಸಮರ್ಪಣ.

---

## ಮೈಸೂರು ವಿಶ್ವವಿದ್ಯಾನಿಲಯ

# ಪ್ರಚಾರಪುಸ್ತಕಮಾಲೆ

೧. ಖಗೋಳಶಾಸ್ತ್ರ ಪ್ರವೇಶ–
ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ. ಎಸ್‌ಸಿ.
೨. ಸಮಾಜದ ರೋಗ ರುಜಿನಗಳು–
ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ–ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು–ಎಚ್. ಸುಬ್ಬಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು–ಜಿ. ಎನ್. ಕೃಷ್ಣಮೂರ್ತಿ, ಎಂ. ಎ.
೬. ಕುಮಾರವ್ಯಾಸ–ಎಸ್. ವಿ. ರಂಗಣ್ಣ, ಎಂ. ಎ.
೭. ಹಂಪೆಯ ಹರಿಹರ–ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ–ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ–ಬಿ.ಎ. ಕೃಷ್ಣಸ್ವಾಮಿರಾವ್,
ಎಂ. ಎಸ್‌ಸಿ
೧೦. ಪಂಪ–ತೀ. ನಂ. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಿಜೀವನ–ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು–ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧ . ಮದುವೆ–ನಾ. ಕಸ್ತೂರಿ, ಎಂ ಎ., ಬಿ.ಎಲ್.
೧೪ ನಮ್ಮ ಆರ್ಥಿಕ ದೃಷ್ಟಿ–ಎಸ್. ಗೋಪಾಲಸ್ವಾಮಿ, ಎಂ. ಎ.
೧೫. ವಾಯುಗುಣ–ಕೆ. ಶೇಷಾದ್ರಿ ಅಯ್ಯಂಗಾರ್,
ಎಂ.ಎಸ್‌ಸಿ., ಎಲ್.ಎಲ್.ಬಿ.
೧೬. ಬೆಳಕು–ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕರ್ನಾಟಕ ಕಾದಂಬರಿ–ವಿ. ಸೀತಾರಾಮಯ್ಯ, ಎಂ.ಎ.
೧೮ ಕಾಳಿದಾಸನ ಕಾವ್ಯಗಳು–ಎಸ್. ರಾಮಚಂದ್ರರಾವ್, ಎಂ.ಎ.
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ–
ಪಿ. ಜಿ. ಸತ್ಯಗಿರಿನಾದನ್, ಎಂ.ಎ.
೨೦. ಕಣ್ಣು ಮತ್ತು ಅದರ ರಕ್ಷಣೆ–ಡಿ. ಶಾಮಣ್ಣ,
ಬಿ.ಎ., ಎಂ.ಬಿ.ಬಿ.ಎಸ್.
೨೧. ಸಾರ್ವಜನಿಕ ವೆಚ್ಚ–ಎಂ. ಎಚ್. ಗೋಪಾಲ್, ಎಂ.ಎ.,ಪಿ.ಎಚ್.ಡಿ.
೨೨. ಶಿಶುವಿಹಾರಗಳು–ಸಿ. ರಂಗಾಚಾರ್, ಬಿ. ಎಸ್‌ಸಿ., ಎಂ. ಎಡ್.
೨೩. ಸಂಖ್ಯೋದ್ಯಾನ–ಬಿ. ಸೀತಾರಾಮಶಾಸ್ತ್ರೀ, ಎಂ.ಎ.

[ಪು.ತಿ.ನೋ.]

೨೪. ವಿಡಂಬನ-ಎಸ್. ವಿ. ರಂಗಣ್ಣ, ಎಂ.ಎ.
೨೫. ಅಜಂತ ಮತ್ತು ಎಲ್ಲೋರ-ಡಾ|| ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ
೨೬. ಸಾರಜನಕದ ಮಹತ್ವ-ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೨೭. ಭಾಸ-ಎಚ್. ಎಲ್. ಹರಿಯಪ್ಪ, ಎಂ.ಎ.
೨೮. ಪಾಶ್ಚಾತ್ಯ ರಾಜಕೀಯ ತತ್ವಗಳು- ಎಂ. ಯಾಮುನಾಚಾರ್ಯ, ಎಂ.ಎ.
೨೯. ಸರ್ವಜ್ಞ ಕವಿ-ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.
೩೦. ರಕ್ತ-ಡಿ. ಶಾಮಣ್ಣ, ಬಿ.ಎ., ಎಂ.ಬಿ.ಬಿ.ಎಸ್.
೩೧. ಇಂಗ್ಲಿಷ್ ಪ್ರಬಂಧಗಳು-ಎಸ್. ಮಂಜನಾಥ್, ಎಂ.ಎ.
೩೨. ಅಕ್ಕಮಹಾದೇವಿ-ಎಸ್. ವಿ. ಪರಮೇಶ್ವರಭಟ್ಟ, ಎಂ.ಎ.
೩೩. ಗಣಿತಶಾಸ್ತ್ರದ ಸ್ವರೂಪ-ಸಿ. ಎನ್. ಶ್ರೀನಿವಾಸ ಅಯ್ಯಂಗಾರ್ ಡಿ.ಎಸ್.
೩೪. ಋಗ್ವೇದ-ಎಂ. ಎ. ಕೃಷ್ಣಸ್ವಾಮಿ, ಎಂ.ಎ.
೩೫. ಕುಮಾರವ್ಯಾಸ ವಾಣಿ-ಎಸ್. ವಿ. ರಂಗಣ್ಣ, ಎಂ.ಎ.
೩೬. ಆಳ್ವಾರುಗಳು-ಎಂ. ಯಾಮುನಾಚಾರ್ಯ, ಎಂ.ಎ.
೩೭. ಹಿಂದು ಮುಸ್ಲಿಂ ಸೌಹಾರ್ದವನ್ನು ಬೆಳಸಿದ ರಾಜರು- ವಿ. ರಾಘವೇಂದ್ರರಾವ್, ಎಂ.
೩೮. ಸುಭಾಷಿತ ಸಂಗ್ರಹಗಳು-ಎಂ. ಪಿ. ಲಕ್ಷ್ಮೀನೃಸಿಂಹ ಶಾಸ್ತ್ರೀ, ಎಂ.ಎ.

೧೯೪೨ನೆಯ ಜುಲೈನಿಂದಾಚೆಗೆ ಪ್ರಕಟವಾಗುವ ಸಾಧಾರಣ ಪ್ರತಿ ಒಂದಕ್ಕೆ ೩ ಆಣೆ; ವಾರ್ಷಿಕ ಚಂದಾ (೯ ಪುಸ್ತಕಗಳಿಗೆ) ರೂ. ೧-೪-೦. ಉತ್ತಮ ಪ್ರತಿ ಒಂದಕೆ ೪ ಆಣೆ; ವಾರ್ಷಿಕ ಚಂದಾ (೯ ಪುಸ್ತಕಗಳಿಗೆ ರೂ. ೨-೦-೦.

**ಸಂಪಾದಕ, ಪ್ರಚಾರಪುಸ್ತಕಮಾಲೆ,**

ಯೂನಿವರ್ಸಿಟಿ ಆಫೀಸ್, ಮೈಸೂರು